1

# ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರ ಹೆಸರು | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2296 |
| ಉತ್ತರಿಸಬೇಕಾದ ದಿನಾಂಕ | 19.03.2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರ ಮತ್ತು ಎಂ.ಕೆ. ಹುಬ್ಬಳ್ಳಿ ಪಟ್ಟಣಗಳಿಗೆ ರೇಣುಕಾ ಸಾಗರದಿಂದ ಕುಡಿಯುವ ನೀರು ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದು ನಿಜವೇ; | ಕಿತ್ತೂರ ಮತ್ತು ಎಂ.ಕೆ. ಹುಬ್ಬಳ್ಳಿ ಪಟ್ಟಣಗಳಿಗೆ ರೇಣುಕಾ ಸಾಗರದಿಂದ ಕುಡಿಯುವ ನೀರು ಒದಗಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಈ ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; | ಕಿತ್ತೂರು ಮತ್ತು ಎಮ್. ಕೆ. ಹುಬ್ಬಳ್ಳಿ ಪಟ್ಟಣಗಳು ಹಾಗೂ ಮಾರ್ಗ ಮಧ್ಯದ 13 ಹಳ್ಳಿಗಳಿಗೆ ರೇಣುಕಾ ಸಾಗರ ಜಲಾಶಯದಿಂದ ಕುಡಿಯುವ ನೀರು ಸರಬರಾಜು ಮಾಡಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ರೂ.12321.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಲಾಗುತ್ತಿದ್ದು ಮಂಡಳಿಯಿಂದ ಆಡಳಿತಾತ್ಮಕ ಅನುಮೋದನೆಗಾಗಿ ಪ್ರಸ್ತಾವನೆಯು ಸ್ವೀಕೃತವಾದಲ್ಲಿ ನಿಯಮಾನುಸಾರ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಅನುದಾನದ ಲಭ್ಯತೆಗನುಗುಣವಾಗಿ ಪರಿಶೀಲಿಸಲಾಗುವುದು. |
| ಇ) | ಈ ಪ್ರಸ್ತಾವನೆಗೆ ಅನುಮೋದನೆ ನೀಡಿ, ಅನುದಾನ ಬಿಡುಗಡೆಗೆ ಸರ್ಕಾರದ ಕ್ರಮವೇನು; | |

ಸಂಖ್ಯೆ: ನಅಇ 65 ಯುಎಂಎಸ್ 2021

(ಬಿ.ಎ.ಬಸವರಾಜ)

ನಗರಾಭಿವೃದ್ಧಿ ಸಚಿವರು

೩

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2088

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರಾಘವೇಂದ್ರ ಬಸವರಾಜ್ ಹಿಟ್ನಾಳ್ ಕೆ. (ಕೊಪ್ಪಳ)

ಉತ್ತರಿಸಬೇಕಾದ ದಿನಾಂಕ : 19.03.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಪ್ಪಳ ವಿಧಾನ ಸಭಾ ಕ್ಷೇತ್ರದಲ್ಲಿರುವ ಬಿ.ಪಿ.ಎಲ್ ಮತ್ತು ಅಂತ್ಯೋದಯ ಪಡಿತರ ಚೀಟಿದಾರರ ಸಂಖ್ಯೆ ಎಷ್ಟು; | ಕೊಪ್ಪಳ ವಿಧಾನಸಭಾ ಕ್ಷೇತ್ರದಲ್ಲಿ ಒಟ್ಟು 60650 ಆದ್ಯತಾ ಹಾಗೂ 6715 ಅಂತ್ಯೋದಯ ಪಡಿತರ ಚೀಟಿಗಳು ಇರುತ್ತವೆ. |
| ಆ | ಪ್ರಸ್ತುತ ಹೊಸದಾಗಿ ಪಡಿತರ ಚೀಟಿ ವಿತರಿಸಲಾಗುತ್ತಿದೆಯೇ; | ಹೊಸ ಪಡಿತರ ಚೀಟಿಗಾಗಿ ಅರ್ಜಿಗಳ ಸ್ವೀಕೃತಿ ಪ್ರಕ್ರಿಯೆಯನ್ನು ಚಾಲನೆಯಲ್ಲಿದೆ. ಆದ್ಯತಾ ಪಡಿತರ ಚೀಟಿ ವಿತರಣೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿದೆ. ಆದ್ಯತೇತರ ಪಡಿತರ ಚೀಟಿಯನ್ನು ಆನ್ ಲೈನ್ ಮುಖಾಂತರ ಪಡೆದುಕೊಳ್ಳಲು ಅವಕಾಶವನ್ನು ಕಲ್ಪಿಸಲಾಗಿದೆ. |
| ಇ | ಸದರಿ ಕ್ಷೇತ್ರದಲ್ಲಿರುವ ಪಡಿತರ ವಿತರಣಾ ಕೇಂದ್ರಗಳೆಷ್ಟು; | ಕೊಪ್ಪಳ ವಿಧಾನಸಭಾ ಕ್ಷೇತ್ರದಲ್ಲಿ ಒಟ್ಟು 70 ನ್ಯಾಯಬೆಲೆ ಅಂಗಡಿಗಳು ಕಾರ್ಯನಿರ್ವಹಿಸುತ್ತಿವೆ. |
| ಈ | ಈ ಕೇಂದ್ರಗಳಲ್ಲಿ ಪಡಿತರವನ್ನು ಹೆಚ್ಚಿನ ದರಕ್ಕೆ ವಿತರಣೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಉ | ಬಂದಿದ್ದಲ್ಲಿ, ಇಂತಹ ಎಷ್ಟು ಪಡಿತರ ಕೇಂದ್ರಗಳ ವಿರುದ್ಧ ಸರ್ಕಾರದ ಇದುವರೆಗೆ ಕ್ರಮ ಕೈಗೊಂಡಿದೆ? | ಉದ್ಭವಿಸುವುದಿಲ್ಲ. |

ಆನಾಸ 112 ಡಿಆರ್‌ಎ 2021 (ಇ-ಆಫೀಸ್)

(ಉಮೇಶ.ವಿ ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

4

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3272 |
| ಸದಸ್ಯರ ಹೆಸರು | : | ಶ್ರೀ ಸತೀಶ್ ಎಲ್.ಜಾರಕಿಹೊಳಿ (ಯಮಕನಮರಡಿ) |
| ಉತ್ತರಿಸುವವರು | : | ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು |
| ಉತ್ತರಿಸುವ ದಿನಾಂಕ | : | 19.03.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಡಿಯಲ್ಲಿ ಇತ್ತೀಚೆಗೆ ಸರ್ಕಾರ FACILITATION ಎಂಬ ಹೊಸ ಕಾನೂನನ್ನು ಜಾರಿಗೆ ತಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಹೌದು. |
| ಆ | ಬಂದಿದ್ದಲ್ಲಿ, ಈ ಕಾನೂನಿನಿಂದಾಗುವ ಉಪಯೋಗವೇನು; (ವಿವರ ನೀಡುವುದು) | ಉತ್ಪಾದನೆ ಕೈಗಾರಿಕೆಗಳು/ಉದ್ದಿಮೆಗಳು ಘಟಕಗಳ ಅನುಷ್ಠಾನ ಪೂರ್ವದಲ್ಲಿ ರಾಜ್ಯದ ವಿವಿಧ ಇಲಾಖೆಗಳಿಂದ ಪಡೆಯಬೇಕಾಗಿರುವ ಅನುಮೋದನೆಗಳಿಗಾಗಿ ಕಾಯದೇ ಕೂಡಲೇ ಕೈಗಾರಿಕೆಗಳನ್ನು ಸ್ಥಾಪಿಸುವ ಸಲುವಾಗಿ ದಿನಾಂಕ 18.10.2020 ರಂದು ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ 2002ರ ತಿದ್ದುಪಡಿ ವಿಧೇಯಕವನ್ನು ಹೊರಡಿಸಲಾಗಿದೆ ಹಾಗೂ ಇದಕ್ಕೆ ಸಂಬಂಧಪಟ್ಟಂತೆ ನಿಯಮಗಳನ್ನು ದಿನಾಂಕ 04.11.2020 ರಂದು ಹೊರಡಿಸಲಾಗಿದೆ.<br><br>ಇದೊಂದು ವಿಶಿಷ್ಟ ಯೋಜನೆಯಾಗಿದ್ದು, ದೇಶದಲ್ಲಿಯೇ ಪ್ರಥಮ ಬಾರಿಗೆ ಸೂಕ್ಷ್ಮ, ಸಣ್ಣ, ಮಧ್ಯಮ ಮತ್ತು ಬೃಹತ್ ಉತ್ಪಾದನಾ ಕೈಗಾರಿಕೆಗಳು ರಾಜ್ಯದಲ್ಲಿ ಸುಲಲಿತವಾಗಿ ಯೋಜನೆ ಅನುಷ್ಠಾನ ಗೊಳಿಸಲು ಸಹಕಾರಿಯಾಗಿದೆ. ಈ ಯೋಜನೆಯು Affidavit Based Clearance (ABC) ವ್ಯವಸ್ಥೆಯಾಗಿದ್ದು, ಸನ್ಮಾನ್ಯ ಮುಖ್ಯಮಂತ್ರಿಯವರು ದಿನಾಂಕ 21.12.2020 ರಂದು ಚಾಲನೆ ನೀಡಿದ್ದಾರೆ.<br><br>ಇದರಲ್ಲಿ ರಾಜ್ಯದ ಸಂಬಂಧಿಸಿದ ಇಲಾಖೆಗಳ 15 ಸೇವೆಗಳನ್ನು ಗುರುತಿಸಿ ಉತ್ಪಾದನಾ ಕೈಗಾರಿಕೆಗಳ/ಉದ್ಯಮಗಳ ಸ್ಥಾಪನೆಗೆ ಸ್ವೀಕೃತಿ ಪತ್ರ ನೀಡಲು ಅನುವು ಮಾಡಲಾಗಿದೆ. ಯೋಜನೆ /ಕೈಗಾರಿಕೆ ಸ್ಥಾಪನೆಗಾಗಿ ಸ್ವೀಕೃತಿ ಪತ್ರದ ಮೂಲಕ ನೀಡಲಾದ ಒಪ್ಪಿಗೆಯನ್ನು ಸದರಿ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು, ತಪ್ಪಿದ್ದಲ್ಲಿ ಅಂತಹ ಪ್ರಕರಣಗಳನ್ನು ಅಪರಾಧವೆಂದು ಪರಿಗಣಿಸಲಾಗುವುದು ಹಾಗೂ ನಿಗದಿತ ದಂಡವನ್ನು |

ಜುಲ್ಮಾನೆಯೊಂದಿಗೆ ವಿಧಿಸಬಹುದಾಗಿದೆ ಹಾಗೂ ಸಂಬಂಧಿತ ಇಲಾಖೆಗಳು ಸಂಬಂಧಪಟ್ಟ ಅಧಿನಿಯಮಗಳ ಅಡಿಯಲ್ಲಿ ದಂಡನಾಕ್ರಮವನ್ನು ಅನುಸರಿಸಲಾಗುವುದು.

ಈ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯ ಮಟ್ಟದಲ್ಲಿ ಕರ್ನಾಟಕ ಉದ್ಯೋಗ ಮಿತ್ರ ಕಚೇರಿಯು ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರವು ನೋಡಲ್ ಏಜೆನ್ಸಿಯಾಗಿರುತ್ತದೆ. SHLCC/SLSWCC/ DLSWCC ಸಭೆಗಳಲ್ಲಿ ಅನುಮೋದನೆಗೊಂಡ ಉತ್ಪಾದನೆ ಕೈಗಾರಿಕೆ/ಉದ್ದಿಮೆಗಳು ನಿಯಮಗಳ ಅಧಿಸೂಚನೆಯನುಸಾರ ವಿವಿಧ ಸೇವೆಗಳ ಅನುಮೋದನೆಗೆ ನಿಗದಿತ ಸೇವಾ ಶುಲ್ಕ ಪಾವತಿಸಿ ಹಾಗೂ ಅವಶ್ಯ ಸ್ವಯಂ ಘೋಷಣಾ ಪ್ರಮಾಣ ಪತ್ರ (Affidavit)ದೊಂದಿಗೆ ಆನ್‌ಲೈನ್‌ನಲ್ಲಿ ನೋಡಲ್ ಏಜೆನ್ಸಿ (ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆ)ಗೆ ಅರ್ಜಿ ಸಲ್ಲಿಸಬೇಕಾಗಿದೆ. ನೋಡಲ್ ಏಜೆನ್ಸಿಯು ನಿಗದಿತ ಕಾರ್ಯವಿಧಾನದಂತೆ ಸ್ವೀಕೃತಿ ಪ್ರಮಾಣ ಪತ್ರವನ್ನು ಯೋಜನಾ ಪ್ರವರ್ತಕರಿಗೆ ನೀಡಲಾಗುವುದು. ಈ ಸ್ವೀಕೃತಿ ಪ್ರಮಾಣ ಪತ್ರದ ಸಿಂಧುತ್ವವು ಗರಿಷ್ಠ 3 ವರ್ಷ ಅಥವಾ ಕೈಗಾರಿಕೆ ಘಟಕಗಳ ಉತ್ಪಾದನೆಯ ಪ್ರಾರಂಭದವರೆಗೂ ಯಾವುದು ಮೊದಲೋ ಅಲ್ಲಿಯವರೆಗೆ ಇರುತ್ತದೆ.

ಇದರಿಂದಾಗಿ ರಾಜ್ಯದಲ್ಲಿ ಕೈಗಾರಿಕೆಗಳ ಸ್ಥಾಪನೆಯ ಕಾಲಾವಧಿಯನ್ನು ಕಡಿಮೆಗೊಳಿಸಿ ಕೈಗಾರೀಕರಣ ಶೀಘ್ರಗೊಳಿಸಲು ಅನುವು ಮಾಡಿಕೊಡಲಾಗಿದೆ.

ಸರ್ಕಾರದ ಮುಖ್ಯಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ರವರ ನೇತೃತ್ವದಲ್ಲಿ ದಿನಾಂಕ: 13-11-2020 ಮತ್ತು ದಿನಾಂಕ 04-12-2020 ರಲ್ಲಿ ವಿಶೇಷವಾಗಿ ಸಾಫ್ಟ್‌ವೇರ್ ಅಭಿವೃದ್ಧಿಯ ಸಂಬಂಧ ವಿವಿಧ ಇಲಾಖೆಗಳೊಂದಿಗೆ ಸಭೆ ನಡೆಸಲಾಯಿತು ಹಾಗೂ ತದನಂತರ ಸಾಫ್ಟ್‌ವೇರ್‌ನ್ನು ಅಭಿವೃದ್ಧಿಪಡಿಸಿ ಕರ್ನಾಟಕ ಉದ್ಯೋಗ ಮಿತ್ರದ ವೆಬ್‌ಸೈಟ್ ಪೋರ್ಟಲ್ https://ebiz.karnataka.gov.in/KUM/UI/Pages/frmDashBoard.aspx ನಲ್ಲಿ ಅಳವಡಿಸಲಾಗಿದ್ದು ಈಗಾಗಲೇ 9 ಕೈಗಾರಿಕಾ ಪ್ರವರ್ತಕರು ಅರ್ಜಿ ಸಲ್ಲಿಸಿ ಪ್ರಯೋಜನ ಪಡೆದಿರುತ್ತಾರೆ.

ಕರ್ನಾಟಕ ಉದ್ಯೋಗ ಮಿತ್ರದಲ್ಲಿ ಪಡೆಯಲಾಗುವ ವಿವಿಧ ಇಲಾಖೆಗಳ ಸೇವೆಗಳ ಮೊತ್ತವನ್ನು ಆಯಾ ಇಲಾಖೆಗಳಿಗೆ ಪಾವತಿಸಲು ಸಹಕಾರಿಯಾಗುವಂತೆ ಪೇಮೆಂಟ್ ಅಗ್ರಿಗೇಟರ್ ಆಗಿ ಕೇಂದ್ರ ಸರ್ಕಾರದ ಇಲಾಖೆಯ ಸರಹದ್ದಿನಲ್ಲಿರುವ "ಪೇಗೌ" ಸಂಸ್ಥೆಯೊಂದಿಗೆ ಒಡಂಬಡಿಕೆ ಮಾಡಿಕೊಳ್ಳಲಾಗಿದೆ.

| | | |
|---|---|---|
| | | ಅಲ್ಲದೆ ಈ ಸಂಬಂಧ ರಾಜ್ಯ ಸರ್ಕಾರದ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಕೆಯುಎಂ 290 ಆಫೀಸ್ ಅಕೌಂಟ್ 2020-21 (ಆಇ 1 ವೆಚ್ಚ-1/2021), ದಿನಾಂಕ 09.02.2021 ರಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಆಫೀಸ್ ಅಕೌಂಟ್ ಖಾತೆ ತೆರೆಯಲು ಅನುಮೋದನೆ ನೀಡಿದ್ದು ಬ್ಯಾಂಕ್ ಆಫ್ ಬರೋಡ ಆರ್.ಸಿ.ರಸ್ತೆ ಶಾಖೆಯೊಂದಿಗೆ ಖಾತೆ ತೆರೆಯಲು ಕ್ರಮ ಕೈಗೊಳ್ಳಲಾಗಿದ್ದು, ಸದರಿ ಯೋಜನೆಗೆ ಸಂಬಂಧಿಸಿದಂತೆ ಅರ್ಜಿಯನ್ನು ಹಾಗೂ ಸೇವಾ ಶುಲ್ಕಗಳನ್ನು ಆನ್ ಲೈನ್ ಮೂಲಕವೇ ಸಲ್ಲಿಸಬೇಕಾಗಿದ್ದು ಈ ವ್ಯವಸ್ಥೆ ಜಾರಿಯಲ್ಲಿರುತ್ತದೆ. |
| ಇ | ಈ ಕಾನೂನು ಜಾರಿಯಾದಾಗಿನಿಂದ ಇಲ್ಲಿಯವರೆಗೆ ಲಾಭ ಪಡೆದ ಫಲಾನುಭವಿಗಳ ಸಂಖ್ಯೆ ಎಷ್ಟು? (ಸಂಪೂರ್ಣ ವಿವರ ನೀಡುವುದು.) | ರಾಜ್ಯದಲ್ಲಿ ಈವರೆಗೂ ಒಟ್ಟು 9 ವಿವಿಧ ಕೈಗಾರಿಕೆಗಳು ಪ್ರಯೋಜನ ಪಡೆದು ಕೈಗಾರಿಕೆಗಳ ಸ್ಥಾಪನೆಗೆ ಕ್ರಮ ಕೈಗೊಂಡಿರುತ್ತವೆ.<br><br>ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ. |

ಸಿಐ 110 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

LAQ 3272 – Annexure

'aunch of Simplified scheme for setting up of industries through Affidavit Based Clearances - 21st December, 2020

| SLNo | UNIT NAME AND ADDRESS | CONTACT PERSON | DISTRICT NAME | LOCATION | PRODUCTS | INVESTMENT (Rs. In Crores) |
|---|---|---|---|---|---|---|
| 1 | M/s Adarsha Pharmaceutical Industry Supermarket Main Road, Kalaburagi Plot No 22, Adarsha Medical H – 585103 | LAKSHMI PATIL | Yadgir | 10 acres of land in Kadechur Industrial Area, Yadgir District | Nifedipine, Phenyl Ephrine Hci, Sideenafil Citrate, Ursodexycholic Acid | 40.00 |
| 2 | M/s Surukshaa Star Organics Private Limited Peenya Industrial Area, Bangalore Shed No.B-161, 4th Main Road, Peenya 2nd Stage, Bangalore - 560058 (Promoter: Mr.Ram Prasad Rai (MD)- 9845011040) | Ram Prasad Rai | HASSAN | 2 acres land at Plot Nos. I-C-7 or I-C-8 in Hassan Growth Center, Hassan District | Sodium Triacetoxyborohydride, Imidazole, 1 Methyl Imidazole, 2 methyl Imidazole, carbonyldiimidazole, 2 methyl 5 Nitroimidazole | 18.00 |
| 3 | M/s Euploid Pharmaceuticls Pvt Ltd K No 29/2, no. 15, 2nd floor, Vinayaka Layout, Old Madras road, KR Puram, Bangalore - 560 036 (Promoter: Mr.C R Raju) Category: SC | CR Raju Raghavendra | Mysore | 2 acres of land at Plot No.236A, 2nd phase, Thandya Industrial Area, Mysore | Pharmaceutical Oral Solid Dosages of Tablet & Capsules | 17.82 |
| 4 | M/s Bhagiradha Chemicals and Industries Limited Plot no 3, Sagar Society, Road No.2 Banjara Hills, Hyderabad -500034 | bandhakavi krishna mohan rao | Yadgir | 33 acres 8 guntas of land at Plot Nos.137 to 157 in Kadechur Industrial Area, Yadgir District | Agro Chemicals | 345.31 |
| 5 | M/s Rotary Connectors Private Limited No 18, 5th Cross, 4th Main, West of Chord Road, Bengaluru - 560044 | Gangadharan Mani | BANGALORE RURAL | 1 acre of land at Aerospace SEZ, Bengaluru | Design, development and manufacturing of Electronic, Electromechanical, Mechanical parts for Defence, Industrial and Automotive applications | 17.20 |
| 6 | M/s Vijayavani Printers K R Puram, Seegahalli - 560049 (Promoter: Mr.Harsha Vardhan N - 8897559557) | Harsha Vardhan Nayuni | KOLAR | 1.3 acres of land at Plot No.78 in Vemgal Industrial Area, Kolar District | Printing Books | 25.00 |
| 7 | M/s JD Nutrition Benagaana halli, KR Pete Taluk, Mandya. | Cherukuru jayadeva naidu | Mandya District | 1 acre of land at KR pet | Manufacturing of pelet for poutary | 48.00 |

| | | | | | | |
|---|---|---|---|---|---|---|
| 8 | M/s ARSOM CNC PVT LTD<br>#21, C- 104, Concorde Midway City, Basapura, Bangalore – 560 100<br>(Promoter: Mr.A R Chellappan - 9844508918) | CHELLAPPAN A R | BANGALORE RURAL | 1 acre of land at Plot No. 26-A, Sompura 1st Stage Industrial Area, Bangalore Rural District | Manufacturing Of Steam Turbine Sub Assembly & Moving Blade | 15.60 |
| 9 | M/s OM Industries<br>No76 Kattamnallur village Bidarahalli Hobli Old Madras Road, Bangalore – 560049 | Jagadish R | KOLAR | 1 acre of land at Plot No.189-B2 in Jakkasandra Industrial Area, Kolar District | Manufacturing of Plywood, Particle Board and Hard Board and Medium density fibre Board | 15.03 |

5

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3267
2. ಸದಸ್ಯರ ಹೆಸರು : ಶ್ರೀಮತಿ ರೂಪಕಲಾ ಎಂ. (ಕೆ.ಜಿ.ಎಫ್.)
3. ಉತ್ತರಿಸುವ ದಿನಾಂಕ : 19.03.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೆ.ಜಿ.ಎಫ್.ನಲ್ಲಿರುವ ಬಿ.ಇ.ಎಂ.ಎಲ್. ಸಂಸ್ಥೆಗೆ 1964-65ನೇ ಸಾಲಿನಲ್ಲಿ ಸರ್ಕಾರವು ಕಾರ್ಖಾನೆ ಸ್ಥಾಪಿಸಲು 1849-00 ಎಕರೆ ಜಮೀನನ್ನು ಉಚಿತವಾಗಿ ನೀಡಿರುತ್ತದೆ, ಸದರಿ ಜಮೀನಿನ ಪೈಕಿ ಉದ್ದೇಶಿತ ಚಟುವಟಿಕೆಗಳಿಗೆ ಉಪಯೋಗಿಸಿಕೊಂಡು ಬಾಕಿ ಉಳಿದಿರುವ 973-24 ಎಕರೆ ಜಮೀನನ್ನು ಸಂಸ್ಥೆಯಿಂದ ಸರ್ಕಾರದ ವಶಕ್ಕೆ ಪಡೆಯಲು ಪತ್ರ ಬರೆಯಲಾಗಿದ್ದು, ಅದರಂತೆ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗಿದೆಯೇ; | ಸರ್ಕಾರದ ಮುಖ್ಯ ಕಾರ್ಯದರ್ಶಿ ಹಾಗೂ ಭಾರತ ಸರ್ಕಾರದ ಕಾರ್ಯದರ್ಶಿ, DIPAM ಇವರುಗಳನ್ನು ಒಳಗೊಂಡಂತೆ ದಿನಾಂಕ 01.10.2020ರಂದು ಬಿ.ಇ.ಎಂ.ಎಲ್.ಗೆ ರಾಜ್ಯ ಸರ್ಕಾರವು ನೀಡಿರುವ ಜಮೀನುಗಳಲ್ಲಿ ಉಪಯೋಗಿಸದೇ ಇರುವ ಜಮೀನುಗಳ ಕುರಿತು ಸಭೆ ನಡೆಸಲಾಗಿದ್ದು, ಸದರಿ ಸಭೆಯಲ್ಲಿ ಕೋಲಾರ ಜಿಲ್ಲೆಯ ಕೆ.ಜಿ.ಎಫ್‌ನಲ್ಲಿ ರಾಜ್ಯ ಸರ್ಕಾರವು ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್ (ಬಿ.ಇ.ಎಂ.ಎಲ್) ಕಾರ್ಖಾನೆ ಸ್ಥಾಪಿಸಲು ನೀಡಿರುವ ಒಟ್ಟು ಜಮೀನಿನ ಪೈಕಿ ಬಳಕೆ ಮಾಡದೇ ಇರುವ 973 ಎಕರೆ ಜಮೀನಿನ ಕುರಿತು ಕೆಳಕಂಡಂತೆ ತೀರ್ಮಾನಿಸಲಾಗಿದೆ:<br>1. **Deputy Commissioner, Kolar to take back 973 acres of unutilized land at KGF from BEML and handover the same to KIADB for development of Industrial Area.**<br>2. **CMD, BEML to handover the unutilized land to the Deputy Commissioner, Kolar, within 15 days.**<br>ಅದರಂತೆ, ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ ಇವರ ಆದೇಶ ಸಂಖ್ಯೆ: ಎಲ್‌ಎನ್‌ಡಿ/ಸಿಆರ್-64/ 2020-21, ದಿನಾಂಕ 12.11.2020ರಲ್ಲಿ ಕೆ.ಜಿಎಫ್. ತಾಲ್ಲೂಕು, ರಾಬರ್ಟ್.ಸನ್ ಪೇಟೆ ಹೋಬಳಿ, ಬಂಗಾರದ ಗಣಿ ಗ್ರಾಮದಲ್ಲಿ ರಾಜ್ಯ ಸರ್ಕಾರವು ಬಿ.ಇ.ಎಂ.ಎಲ್. ಕಾರ್ಖಾನೆ ಸ್ಥಾಪಿಸಲು ನೀಡಿರುವ ಒಟ್ಟು 1870-30 ಎಕರೆ ಜಮೀನಿನ ಪೈಕಿ ಮಂಜೂರಾದ ಉದ್ದೇಶಕ್ಕೆ ಉಪಯೋಗಿಸದೆ ಇರುವ 967-20 ಎಕರೆ ಜಮೀನನ್ನು ಎಲ್ಲಾ ಋಣ ಭಾರಗಳಂದ ಮುಕ್ತಗೊಳಿಸಿ ಕಂದಾಯ ಇಲಾಖೆಗೆ ವಾಪಸ್ಸು ಪಡೆಯಲು ಆದೇಶಿಸಿರುತ್ತಾರೆ. |

| | | |
|---|---|---|
| | | ಸದರಿ ಆದೇಶದನ್ವಯ ಬಿ.ಇ.ಎಂ.ಎಲ್ ಸಂಸ್ಥೆಯಿಂದ ಬಳಕೆ ಮಾಡದೇ ಇರುವ 967-20 ಎಕರೆ ಭೂಮಿಯನ್ನು ಕಂದಾಯ ಇಲಾಖೆಯು ವಾಪಸ್ಸು ಪಡೆದಿರುತ್ತದೆ. |
| (ಆ) | ಈ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗಿದ್ದಲ್ಲಿ, ಸದರಿ ಜಮೀನಿನಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರ ಕ್ರಮ ಕೈಗೊಂಡಿದೆಯೇ; (ವಿವರ ನೀಡುವುದು) | ಬಿ.ಇ.ಎಂ.ಎಲ್ ರವರಿಂದ ವಾಪಸ್ಸು ಪಡೆಯಲಾದ 967-20 ಎಕರೆ ಜಮೀನಿನಲ್ಲಿ ಕೈಗಾರಿಕಾ ಪ್ರದೇಶದ ಅಭಿವೃದ್ಧಿಗಾಗಿ ಸದರಿ ಜಮೀನನ್ನು ಕೆ.ಐ.ಎ.ಡಿ.ಬಿ.ಗೆ ಹಸ್ತಾಂತರಿಸಲು ದಿನಾಂಕ 05.12.2020 ಹಾಗೂ 04.03.2021 ರಂದು ಕಂದಾಯ ಇಲಾಖೆಗೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯು ಪ್ರಸ್ತಾವನೆ ಸಲ್ಲಿಸಿದೆ. ಕಂದಾಯ ಇಲಾಖೆಯು ಕೆ.ಐ.ಎ.ಡಿ.ಬಿ.ಗೆ ಭೂಮಿಯನ್ನು ಹಸ್ತಾಂತರ ಮಾಡಿದ ನಂತರ, ಕೈಗಾರಿಕಾ ಪ್ರದೇಶವನ್ನು ಅಭಿವೃದ್ಧಿಪಡಿಸಲು ಕ್ರಮ ಕೈಗೊಳ್ಳಲಾಗುವುದು. |
| (ಇ) | ಬಿ.ಇ.ಎಂ.ಎಲ್.ನ ಒಡೆತನದಲ್ಲಿರುವ ಭೂಮಿಯ ಪೈಕಿ ನಿರುಪಯುಕ್ತ ಜಮೀನನ್ನು ಗುರುತಿಸಿ ಸ್ವಾಧೀನಪಡಿಸಿಕೊಳ್ಳಲು ದಿನಾಂಕ: 28.01.2019ರಂದು ಸರ್ಕಾರವು ಸಮಿತಿಯನ್ನು ರಚಿಸಿದ್ದು, ಸದರಿ ಸಮಿತಿಯು ಇದುವರೆಗೆ ಕೈಗೊಂಡ ಕ್ರಮಗಳೇನು; | ಕೆ.ಜಿ.ಎಫ್‌ನಲ್ಲಿ ಕೈಗಾರಿಕಾ ನೋಡ್ ಅಭಿವೃದ್ಧಿಪಡಿಸುವ ಸಂಬಂಧ ಭಾರತ್ ಗೋಲ್ಡ್ ಮೈನ್ಸ್ ಲಿ. (BGML)ನ ಋಣಭಾರ ರಹಿತ ಖಾಲಿ ಜಮೀನನ್ನು ಗುರುತಿಸಲು ಆಯುಕ್ತರು, ಬೃಹತ್ ಮತ್ತು ಮೆಗಾ ಕೈಗಾರಿಕಾ ನಿರ್ದೇಶನಾಲಯ ಇವರ ಅಧ್ಯಕ್ಷತೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಐ/ 126/ ಎಸ್‌ಪಿಐ/ 2018, ದಿನಾಂಕ 28.01.2019ರನ್ವಯ ಸಮಿತಿಯನ್ನು ರಚಿಸಲಾಗಿದೆ.<br><br>ಸದರಿ ಸಮಿತಿಯು ಬಿ.ಜಿ.ಎಂ.ಎಲ್‌ನ ಅಧಿಕಾರಿಗಳೊಂದಿಗೆ ಸಭೆಗಳನ್ನು ನಡೆಸಿದ್ದು ಕೋಲಾರ ಜಿಲ್ಲಾಧಿಕಾರಿಯವರ ಕಛೇರಿ ವತಿಯಿಂದ ಬಿ.ಜಿ.ಎಂ.ಎಲ್. ಸಂಸ್ಥೆಯ ಸಹಾಯೋಗದೊಂದಿಗೆ ಬಿ.ಜಿ.ಎಂ.ಎಲ್. ಪ್ರದೇಶದ ಡ್ರೋನ್ ಸರ್ವೆಯನ್ನು ನಡೆಸಿದ್ದು ಬಿ.ಜಿ.ಎಂ.ಎಲ್. ಸಂಸ್ಥೆಯು ಬಳಸಿಕೊಳ್ಳದೆ ಇರುವ ಹಾಗೂ ಕೈಗಾರಿಕಾ ನೋಡ್ / ಟೌನ್.ಶಿಪ್ ಅಭಿವೃದ್ಧಿಪಡಿಸಬಹುದಾದ ಒಟ್ಟಾರೆ 3212 ಎಕರೆ ಭೂಮಿಯನ್ನು ಗುರುತಿಸಲಾಗಿದೆ.<br><br>BEML ನ ಋಣಭಾರವಿಲ್ಲದ ಹಾಗೂ ಮಂಜೂರಾದ ಉದ್ದೇಶಕ್ಕೆ ಉಪಯೋಗಿಸದೆ ಇರುವ 967-20 ಎಕರೆ ಜಮೀನನ್ನು ಕಂದಾಯ ಇಲಾಖೆಯು ವಾಪಸ್ಸು ಪಡೆದಿರುತ್ತದೆ. |

| | | |
|---|---|---|
| (ಈ) | ಬಿ.ಇ.ಎಂ.ಎಲ್.ನ ಋಣಭಾರವಿಲ್ಲದ ಭೂಮಿಯನ್ನು ಹಸ್ತಾಂತರಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಮನವಿ ನೀಡಲಾಗಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಮಾಹಿತಿ ಬಂದಿದೆಯೇ; | ಬಿ.ಜಿ.ಎಂ.ಎಲ್‌ನ (BGML) ಭೂಮಿಗೆ ಸಂಬಂಧಿಸಿದಂತೆ ಮಾನ್ಯ ಮುಖ್ಯಮಂತ್ರಿಯವರ ದಿನಾಂಕ 09.07.2020ರ ಪತ್ರದಲ್ಲಿ ಕರ್ನಾಟಕ ಸರ್ಕಾರವು ಕೆ.ಜಿ.ಎಫ್.ನಲ್ಲಿ ಕೈಗಾರಿಕಾ ನೋಡ್ / ಟೌನ್.ಶಿಪ್ ಅನ್ನು ಅಭಿವೃದ್ಧಿಪಡಿಸಲು ಬಿ.ಜಿ.ಎಂ.ಎಲ್. (BGML) ಕಂಪನಿಯ ಒಡೆತನದಲ್ಲಿರುವ ಬಳಸಿಕೊಳ್ಳದೇ ಉಳಿದಿರುವಂತಹ 3,212 ಎಕರೆ ಭೂಮಿಯನ್ನು ನೀಡುವಂತೆ ಮಾನ್ಯ ಗಣಿ, ಕಲ್ಲಿದ್ದಲು ಹಾಗೂ ಸಂಸದೀಯ ವ್ಯವಹಾರಗಳ ಕೇಂದ್ರ ಸಚಿವರನ್ನು ಕೋರಿರುತ್ತಾರೆ. |
| (ಉ) | ಬಿ.ಇ.ಎಂ.ಎಲ್.ನ ಒಡೆತನದಲ್ಲಿರುವ ಭೂಮಿಯ ಪೈಕಿ ನಿರುಪಯುಕ್ತ ಜಮೀನನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರ ಇದುವರೆಗೆ ತೆಗೆದುಕೊಂಡ ಕ್ರಮಗಳೇನು? (ವಿವರ ನೀಡುವುದು) | ದಿನಾಂಕ 28.08.2020 ರಂದು ಮಾನ್ಯ ಮುಖ್ಯಮಂತ್ರಿಗಳು ಹಾಗೂ ಮಾನ್ಯ ಗಣಿ, ಕಲ್ಲಿದ್ದಲು ಹಾಗೂ ಸಂಸದೀಯ ವ್ಯವಹಾರಗಳ ಕೇಂದ್ರ ಸಚಿವರ ಜಂಟಿ ಅಧ್ಯಕ್ಷತೆಯಲ್ಲಿ ಬಿ.ಜಿ.ಎಂ.ಎಲ್. (BGML) ಕಂಪನಿಯ ಒಡೆತನದಲ್ಲಿರುವ ಭೂಮಿಯನ್ನು ಉಪಯೋಗಿಸುವ ಕುರಿತು ಸಭೆ ನಡೆಸಲಾಗಿದ್ದು, ಈ ಕೆಳಕಂಡ ತೀರ್ಮಾನಗಳನ್ನು ತೆಗೆದುಕೊಳ್ಳಲಾಗಿದೆ.<br><br>1. **Exploration survey be taken up by the MECL at their cost to be completed within six months of the entire unexplored area of BGML.**<br>2. **The State Government to take up total station survey of the entire BGML land to be completed within three months.**<br>3. **If the land identified to be not suitable for mineral exploitations, the same would be considered for grant to the State Government for development of Industrial Township to the extent of clear vacant land.**<br><br>ಮೆ: ಮಿನರಲ್ ಎಕ್ಸಪ್ಲೋರೇಶನ್ ಕಾರ್ಪೊರೇಶನ್ ಲಿ. (MECL) ಸಂಸ್ಥೆಯು ಸರ್ವೆಯನ್ನು ಕೈಗೆತ್ತಿಕೊಂಡಿರುವುದು ತಿಳಿದುಬಂದಿದ್ದು, ಮಾರ್ಚ್ 2021 ರೊಳಗೆ ಸರ್ವೆ ಕಾರ್ಯವನ್ನು ಮುಗಿಸುವುದಾಗಿ ತಿಳಿಸಿರುತ್ತದೆ. |

(ಜಗದೀಶ ಶೆಟ್ಟರ)

ಸಂಖ್ಯೆ: ಸಿಐ 87 ಐಎಪಿ (ಇ) 2021

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

(7)

# ಕರ್ನಾಟಕ ವಿಧಾನ ಸಭೆ

| | |
|---|---|
| ಸದಸ್ಯರ ಹೆಸರು | ಶ್ರೀ ಶಿವಲಿಂಗೇಗೌಡ ಕೆ.ಎಂ.(ಅರಸೀಕೆರೆ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 3155 |
| ಉತ್ತರಿಸಬೇಕಾದ ದಿನಾಂಕ | 19..03.2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಅರಸೀಕೆರೆಯಲ್ಲಿ ಯು.ಜಿ.ಡಿ ಒಳಚರಂಡಿ ಕಾಮಗಾರಿಯು ಅರ್ಧಕ್ಕೆ ನಿಂತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಈ ಕಾಮಗಾರಿಯು ಅರ್ಧಕ್ಕೆ ನಿಲ್ಲಲು ಕಾರಣಗಳೇನು; | ಈ ಯೋಜನೆಯಡಿಯಲ್ಲಿ ಮೂರು ಔಟ್‌ಫಾಲ್ ಕೊಳವೆ ಮಾರ್ಗಗಳಲ್ಲಿ ಎರಡು ಔಟ್ ಫಾಲ್ ಕೊಳವೆ ಮಾರ್ಗಗಳನ್ನು ಪೂರ್ಣಗೊಳಿಸಲಾಗಿದೆ. ಉಳಿದ ಒಂದು ಔಟ್‌ಫಾಲ್ ಕೊಳವೆಯನ್ನು ಹೆಂಜಗೋಡನಹಳ್ಳಿ ಮಾರ್ಗದಲ್ಲಿ ಸುಮಾರು 1.7 ಕಿ.ಮೀ ಉದ್ದಕ್ಕೆ ಅಳವಡಿಸಬೇಕಾಗಿದ್ದು, ಈ ಮಾರ್ಗದಲ್ಲಿ ಖಾಸಗಿ ಜಮೀನನ್ನು ಭೂ-ಸ್ವಾಧೀನಪಡಿಸ ಬೇಕಾಗಿರುವುದರಿಂದ ಬಾಕಿ ಉಳಿದಿರುತ್ತದೆ. ಈ ಯೋಜನೆಗೆ ಅವಶ್ಯವಿರುವ ಜಾಗಗಳನ್ನು ನಗರಸಭೆಯಿಂದ ಭೂಸ್ವಾಧೀನಪಡಿಸಿಕೊಂಡು ಹಸ್ತಾಂತರಿಸ ಬೇಕಾಗಿರುತ್ತದೆ. ಆದರೆ ನಗರ ಸಭೆಯಲ್ಲಿ ಅನುದಾನದ ಕೊರತೆ ಇದ್ದುದ್ದರಿಂದ ಈ ಔಟ್‌ಫಾಲ್ ಗೆ ಸಂಬಂಧಿಸಿದ ಹಾಗೂ ಉಳಿದ ಮುಖ್ಯ ಕೊಳವೆಗಳನ್ನು ಖಾಸಗಿ ಜಮೀನಿನಲ್ಲಿ ಅಳವಡಿಕೆಗಾಗಿ ಒಟ್ಟಾರೆಯಾಗಿ ಅವಶ್ಯವಿರುವ 3.29 ಎಕರೆ ಜಮೀನಿನ ನೇರ ಖರೀದಿಗೆ ರೂ.9.62 ಕೋಟಿ ಮೊತ್ತವನ್ನು ಎಸ್.ಎಫ್.ಸಿ ಅಥವಾ ಹಾಲಿ ಚಾಲ್ತಿಯಲ್ಲಿರುವ ಅರಸೀಕೆರೆ ನಗರದ ನೀರು ಸರಬರಾಜು ಯೋಜನೆಯ ಉಳಿತಾಯದಡಿಯಲ್ಲಿ ಭರಿಸಲು ಕೋರಿ ಮತ್ತು ಬಾಕಿ ಕಾಮಗಾರಿಗಳನ್ನು ಕೈಗೊಳ್ಳಲು ಅರಸೀಕೆರೆ ನಗರದ ನೀರು ಸರಬರಾಜು ಯೋಜನೆಯಡಿ ಸರ್ಕಾರದಿಂದ ಬಿಡುಗಡೆಯಾಗಿ ಉಳಿತಾಯವಾಗಿರುವ ರೂ.15.78 ಕೋಟಿಗಳ ಅನುದಾನವನ್ನು ಒಳಚರಂಡಿ ಯೋಜನೆಗೆ ಬಳಸಿಕೊಳ್ಳಲು |

| | | |
|---|---|---|
| | | ಪ್ರಸ್ತಾವನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ಅನುಮತಿಯನ್ನು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ.<br>ಮುಂದುವರೆದು, ಸದರಿ ಯೋಜನೆಯಡಿ ಜೇನುಕಲ್ಲು ನಗರ ಮತ್ತು ಗುಂಡಕನಹಳ್ಳಿಯಲ್ಲಿ ಸಂಗ್ರಹಣ ಗುಂಡಿಗಳನ್ನು (Collection Chambers) ನಿರ್ಮಿಸುವುದು ಮತ್ತು ಸೂಕ್ತ ಸಾಮರ್ಥ್ಯದ ನಾನ್ಕ್ಲಾಗ್ಸೀವೇಜ್ಪಂಪ್ ಸೆಟ್‌ಗಳನ್ನು ಅಳವಡಿಸುವುದು ಮತ್ತು ಸಂಗ್ರಹಣ ಗುಂಡಿಗಳಿಂದ ಜೇನುಕಲ್ ನಗರ ಮತ್ತು ಗುಂಡಕನ ಹಳ್ಳಿಯಲ್ಲಿರುವ ರಿಡ್ಜ್ಯಾನ್ಹೋಲ್ಗಳಿಗೆ ಏರುಕೊಳವೆ ಮಾರ್ಗಗಳನ್ನು ಅಳವಡಿಸುವ ಕಾಮಗಾರಿಯ ಉಪ ಅಂದಾಜು ಪಟ್ಟಿ ರೂ.92.60 ಲಕ್ಷಗಳಿಗೆ ದಿನಾಂಕ 16.01.2021 ರಂದು ಅನುಮೋದನೆ ನೀಡಲಾಗಿದ್ದು, ಕಾಮಗಾರಿಯ ಟೆಂಡರ್ ಆಹ್ವಾನಿಸಲಾಗಿದ್ದು, ಗುತ್ತಿಗೆದಾರರನ್ನು ನೇಮಿಸಲು ಕ್ರಮ ಜರುಗಿಸಲಾಗುತ್ತಿದೆ. ಸದರಿ ಕಾಮಗಾರಿಯನ್ನು ಜೂನ್ 2021ರ ಅಂತ್ಯಕ್ಕೆ ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |
| ಇ) | ಸದರಿ ಕಾಮಗಾರಿಯನ್ನು ಪೂರ್ಣಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು | ಸದರಿ ಯೋಜನೆಯಡಿಯಲ್ಲಿ 137 ಕಿ.ಮೀ ಔಟ್‌ಫಾಲ್ ಆಂತರಿಕ ಒಳಚರಂಡಿ ಕೊಳವೆ ಮಾರ್ಗಗಳನ್ನು ಅಳವಡಿಸಲಾಗಿದೆ ಹಾಗೂ 2000 ಸಂಖ್ಯೆ ಮನೆ ಸಂಪರ್ಕಗಳನ್ನು ಕಲ್ಪಿಸಲಾಗಿದೆ. ಹಾಗೂ ನವೀನ ಮಾದರಿಯ 12 ಎಂ.ಎಲ್.ಡಿ ಸಾಮರ್ಥ್ಯದ ಎಸ್.ಬಿ. ಆರ್ತಂತ್ರಜ್ಞಾನದ ಮಲೀನ ನೀರು ಶುದ್ಧೀಕರಣ ಘಟಕವನ್ನು ನಿರ್ಮಿಸಿ, ಜನವರಿ 2020 ರಲ್ಲಿ ಚಾಲನೆಗೊಳಿಸಲಾಗಿದೆ. ಬಿಟ್ಟು ಹೋಗಿರುವ ಪ್ರದೇಶಗಳಿಗೆ ಲಿಂಕ್ಮಾಡುವ ರೂ.167.44 ಲಕ್ಷಗಳ ಕಾಮಗಾರಿಗೆ ಗುತ್ತಿಗೆ ದಾರರನ್ನುನೇಮಿಸಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ ಮತ್ತು ಜೇನುಕಲ್ ನಗರ ಮತ್ತು ಗುಂಡಕನ ಹಳ್ಳಿಯಲ್ಲಿ ಸಂಗ್ರಹಣ ಗುಂಡಿಗಳನ್ನು ನಿರ್ಮಿಸುವುದು ಮತ್ತು ಸೂಕ್ತ ಸಾಮರ್ಥ್ಯದ ನಾನ್ಕ್ಲಾಗ್ಸೀವೇಜ್ ಪಂಪಸೆಟ್‌ಗಳನ್ನು ಅಳವಡಿಸುವುದು ಮತ್ತು ಸಂಗ್ರಹಣ ಗುಂಡಿಗಳಿಂದ ಜೇನುಕಲ್‌ನಗರ ಮತ್ತು ಗುಂಡಕನ ಹಳ್ಳಿಯಲ್ಲಿರುವ ರಿಡ್ಜ್ಯಾನ್ಹೋಲ್ಗಳಿಗೆ ಏರು ಕೊಳವೆ ಮಾರ್ಗಗಳನ್ನು ಅಳವಡಿಸುವ ರೂ.92.60 ಲಕ್ಷಗಳ ಕಾಮಗಾರಿಯನ್ನು ಜೂನ್ |

| | | |
|---|---|---|
| | | 2021ರ ಅಂತ್ಯಕ್ಕೆ ಪೂರ್ಣಗೊಳಿಸಿ ಚಾಲನೆಗೊಳಿಸಲಾಗುವುದು.<br>ಭೂಸ್ವಾಧೀನ ಪ್ರಕ್ರಿಯೆಗಾಗಿ ಹಾಗೂ ಬಾಕಿ ಉಳಿದಿರುವ ಕಾಮಗಾರಿಗಳಿಗೆ ನೀರು ಸರಬರಾಜು ಯೋಜನೆಯಡಿ ಉಳಿತಾಯವಾಗಿರುವ ಅನುದಾನವನ್ನು ಒಳಚರಂಡಿ ಯೋಜನೆಗೆ ಉಪಯೋಗಿಸಿಕೊಳ್ಳಲು ಅನುಮೋದನೆ ದೊರೆತ ನಂತರ ಟೆಂಡರ್ ಆಹ್ವಾನಿಸಿ ಗುತ್ತಿಗೆ ದಾರರನ್ನು ನಿಗಧಿಪಡಿಸಿದ ನಂತರ 6 ತಿಂಗಳ ಒಳಗಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು. |

ಸಂಖ್ಯೆ ನಅಇ 66 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು.



(9)

# ಕರ್ನಾಟಕ ವಿಧಾನ ಸಭೆ

| | |
|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | **3107** |
| ಸದಸ್ಯರ ಹೆಸರು | ಶ್ರೀ ಬಾಲಕೃಷ್ಣ ಸಿ.ಎನ್ |
| ಉತ್ತರಿಸಬೇಕಾದ ದಿನಾಂಕ | 19.03.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯಾದ್ಯಂತ ಬಡವರು / ವಸತಿಹೀನರು ಮನೆ ನಿರ್ಮಿಸಲು ಹಾಗೂ ಸರ್ಕಾರಿ ಯೋಜನೆಗಳಿಗಾಗಿ ಮರಳಿನ ಅಭಾವವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ಸಂಪೂರ್ಣ ಮಾಹಿತಿ ನೀಡುವುದು); | • ಹಾಸನ ಜಿಲ್ಲೆಯಲ್ಲಿ ಲೋಕೋಪಯೋಗಿ ಹಾಗೂ ಇತರ ಅಭಿವೃದ್ಧಿ ಇಲಾಖೆಗಳ ಮಾಹಿತಿಯಂತೆ ಅಂದಾಜು ವಾರ್ಷಿಕ 8 ರಿಂದ 9 ಲಕ್ಷ ಮೆಟ್ರಿಕ್ ಟನ್ ಮರಳಿನ ಬೇಡಿಕೆ ಇರುತ್ತದೆ.<br><br>• ಹಾಸನ ಜಿಲ್ಲೆಯ ಹೇಮಾವತಿ ನದಿ ಪಾತ್ರದ ವ್ಯಾಪ್ತಿಯಲ್ಲಿ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ರ ನಿಯಮ 31-T ರಂತೆ ಟೆಂಡರ್-ಕಂ-ಇ-ಹರಾಜು ಮೂಲಕ 23 ಮರಳು ಬ್ಲಾಕುಗಳಲ್ಲಿ ಮರಳು ಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ. ಸದರಿ ಗುತ್ತಿಗೆ ಪ್ರದೇಶಗಳಿಂದ ಫೆಬ್ರವರಿ 2021 ರ ಅಂತ್ಯಕ್ಕೆ 1,11,040 ಮೆಟ್ರಿಕ್ ಟನ್ ಮರಳನ್ನು ಜಿಲ್ಲೆಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗುತ್ತಿರುತ್ತದೆ.<br><br>• ಹಾಸನ ಜಿಲ್ಲಾ ವ್ಯಾಪ್ತಿಯಲ್ಲಿ 38 ಎಂ-ಸ್ಯಾಂಡ್ ಘಟಕಗಳು ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಘಟಕಗಳ ಎಂ-ಸ್ಯಾಂಡ್ ಉತ್ಪಾದನಾ ಸಾಮರ್ಥ್ಯವು ವಾರ್ಷಿಕ ಅಂದಾಜು 25,12,500 ಮೆಟ್ರಿಕ್ ಟನ್ ಇದ್ದು, ಫೆಬ್ರವರಿ 2021 ರ ಅಂತ್ಯಕ್ಕೆ 4,42,548 ಮೆಟ್ರಿಕ್ ಟನ್ ಮರಳನ್ನು ಉತ್ಪಾದಿಸಿ, ಜಿಲ್ಲೆಯ ಹಾಗೂ ನೆರೆ ಜಿಲ್ಲೆಗಳ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗಿರುತ್ತದೆ. |

--2

| | | |
|---|---|---|
| | | • ಅಲ್ಲದೆ, ತುಮಕೂರು, ಚಿಕ್ಕಮಗಳೂರು, ಮಂಡ್ಯ, ಹಾಗೂ ಇತರೆ ಜಿಲ್ಲೆಗಳಿಂದ 2,34,238 ಮೆಟ್ರಿಕ್ ಟನ್ ಎಂ-ಸ್ಯಾಂಡ್ ಪೂರೈಕೆಯಾಗುತ್ತಿರುವುದರಿಂದ **ಜಿಲ್ಲೆಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳಿನ ಪೂರೈಕೆಯಲ್ಲಿ ವ್ಯತ್ಯಯ ಉಂಟಾಗಿರುವುದು ಕಂಡು ಬಂದಿರುವುದಿಲ್ಲ.** |
| ಆ. | ಹಾಗಿದ್ದಲ್ಲಿ, ಸಾರ್ವಜನಿಕರಿಗೆ ಹಾಗೂ ಸರ್ಕಾರಿ ಕಟ್ಟಡ ನಿರ್ಮಾಣಕ್ಕಾಗಿ ಸುಗಮವಾಗಿ ಮರಳು ದೊರೆಯುವಂತೆ ಮಾಡಲು ಮರಳು ನೀತಿಯನ್ನು ಜಾರಿಗೆ ತರುವ ಬಗ್ಗೆ ಸರ್ಕಾರದ ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ಮಾಹಿತಿ ನೀಡುವುದು)? | ರಾಜ್ಯದ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಸುಲಭವಾಗಿ ಕಡಿಮೆ ದರದಲ್ಲಿ ಮರಳು ಪೂರೈಕೆ ಮಾಡುವ ಸಂಬಂಧ ದಿನಾಂಕ 05.05.2020 ರಂದು ಹೊಸ ಮರಳು ನೀತಿ, 2020ನ್ನು ಜಾರಿಗೊಳಿಸಲಾಗಿರುತ್ತದೆ.<br>• ಅದರಂತೆ, I, II & III ನೇ ಶ್ರೇಣಿಯ ಹಳ್ಳ / ತೊರೆಗಳಲ್ಲಿ ಹಾಗೂ ಕೆರೆಗಳು ಲಭ್ಯವಿರುವ ಮರಳನ್ನು ಗ್ರಾಮ ಪಂಚಾಯಿತಿಗಳ ಮೂಲಕ ವಿಲೇವಾರಿ ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br>• ಪ್ರಸ್ತುತ, 193 ಮರಳು ನಿಕ್ಷೇಪದ ಪ್ರದೇಶಗಳನ್ನು ಗುರುತಿಸಲಾಗಿದ್ದು, ಈ ಪೈಕಿ 87 ಬ್ಲಾಕುಗಳಿಗೆ ಅಧಿಸೂಚನೆ ಹೊರಡಿಸಿ ಕಾರ್ಯಾದೇಶ ನೀಡಲಾಗಿರುತ್ತದೆ.<br>• IV, V & VI ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಅಣೆಕಟ್ಟು / ಜಲಾಶಯ / ಬ್ಯಾರೇಜ್ ಹಾಗೂ ಅಣೆಕಟ್ಟಿನ ಹಿನ್ನೀರಿನ ಪ್ರದೇಶದಲ್ಲಿ ಲಭ್ಯವಿರುವ ಮರಳನ್ನು ತೆಗೆಯಲು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಾದ ಮೆ\|\| ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ ಲಿಮಿಟೆಡ್ (KSMCL) ಮತ್ತು ಮೆ\|\| ಹಟ್ಟಿ ಚಿನ್ನದ ಗಣಿ ನಿಯಮಿತ (HGML) ಇವರಿಗೆ ವಹಿಸಲಾಗಿರುತ್ತದೆ.<br>• ಪ್ರಸ್ತುತ, ಮೆ\|\| ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೊರೇಷನ್ ಲಿಮಿಟೆಡ್ ರವರಿಗೆ 46 ಹಾಗೂ ಮೆ\|\| ಹಟ್ಟಿ ಚಿನ್ನದ ಗಣಿ ನಿಯಮಿತ ರವರಿಗೆ 43 ಮರಳು ಬ್ಲಾಕುಗಳಲ್ಲಿ ಮರಳು ಗಣಿಗಾರಿಕೆ ನಡೆಸಲು ಆಯಾ ಜಿಲ್ಲಾ ಮರಳು ಸಮಿತಿಗಳಿಂದ ಅಧಿಸೂಚನೆ ಹೊರಡಿಸಲಾಗಿರುತ್ತದೆ. |

--3

| | | |
|---|---|---|
| | | • ಹೊಸ ಮರಳು ನೀತಿಯಂತೆ, ಹಾಸನ ಜಿಲ್ಲಾ ವ್ಯಾಪ್ತಿಯಲ್ಲಿ I, II ಮತ್ತು III ನೇ ಶ್ರೇಣಿಯ ಹಳ್ಳ / ತೊರೆ ಒಟ್ಟು 14 ಮರಳು ನಿಕ್ಷೇಪಗಳ ಪ್ರದೇಶಗಳನ್ನು ಗುರುತಿಸಿ, ಸಂಬಂಧಪಟ್ಟ ಗ್ರಾಮ ಪಂಚಾಯತಿಗಳಿಗೆ ಜಿಲ್ಲಾ ಮರಳು ಸಮಿತಿ ಅಧಿಸೂಚನೆ ಹೊರಡಿಸಿ, ಕಾರ್ಯಾದೇಶ ನೀಡಲಾಗಿರುತ್ತದೆ.<br>ವಿವರಗಳನ್ನು **ಅನುಬಂಧ-1 ರಲ್ಲಿ ನೀಡಲಾಗಿದೆ.**<br><br>• ಮುಂದುವರೆದು, IV, V & VI ನೇ ಶ್ರೇಣಿಯ ಹೊಳೆ / ನದಿ ಪಾತ್ರಗಳಲ್ಲಿ 5 ಮರಳು ಬ್ಲಾಕುಗಳನ್ನು ಜಿಲ್ಲಾ ಮರಳು ಸಮಿತಿಯಿಂದ ಗುರುತಿಸಿ, ಸದರಿ ಮರಳು ಬ್ಲಾಕುಗಳಲ್ಲಿ ಗಣಿಗಾರಿಕೆ ನಡೆಸಲು ಮೆ\|\| ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೊರೇಷನ್ ಲಿಮಿಟೆಡ್ ಸಂಸ್ಥೆಗೆ ಅಧಿಸೂಚನೆ ಹೊರಡಿಸಲಾಗಿರುತ್ತದೆ.<br><br>**ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ.** |

ಸಂಖ್ಯೆ ಸಿಐ 187 ಎಂಎಂಎನ್ 2021

**(ಮುರುಗೇಶ್ ಆರ್. ನಿರಾಣಿ)**
ಗಣಿ ಮತ್ತು ಭೂವಿಜ್ಞಾನ ಸಚಿವರು.

ಅನುಬಂಧ-1

## ಹಾಸನ ಜಿಲ್ಲಾ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ I, II & III ನೇ ಶ್ರೇಣಿಯ ಹಳ್ಳಗಳಲ್ಲಿ / ತೊರೆಗಳಲ್ಲಿ ಗುರುತಿಸಿರುವ ಮರಳು ಪ್ರದೇಶಗಳ ವಿವರಗಳು

| ಕ್ರ ಸಂ. | ತಾಲ್ಲೂಕು | ಗ್ರಾಮ ಪಂಚಾಯಿತಿ | ಗ್ರಾಮ | ಹಳ್ಳದ ಪಾತ್ರದ ಪಕ್ಕದ ಸರ್ವೇ ನಂ. | ವಿಸ್ತೀರ್ಣ (ಎಕರೆಗಳಲ್ಲಿ) | ಲಭ್ಯವಿರುವ ಮರಳಿನ ಪ್ರಮಾಣ (ಮೆ.ಟನ್ ಗಳಲ್ಲಿ) |
|---|---|---|---|---|---|---|
| 1 | ಬೇಲೂರು | ಚಿಕ್ಕಮೇದೂರು | ಮರೂರು | 5, 6 | 0.35 | 600 |
| 2 | | | | 5, 96 | 0.35 | 600 |
| 3 | | ದಬ್ಬೆ | ಕಿತೂರು | 37, 36 | 1.00 | 500 |
| 4 | | | ಕರ್ಕಿಹಳ್ಳಿ | 68 | 1.10 | 600 |
| 5 | | ಕೋಗಿಲೆಮನೆ | ರಣಘಟ್ಟ | 94, 95, 96, 97, 98, 99 | 2.20 | 1200 |
| 6 | | | | 2, 100, 101 | 1.25 | 600 |
| 7 | | | | 2 (ರಣಘಟ್ಟ) 139 (ಹಾದಲಗೆರೆ) | 2.00 | 700 |
| 8 | | ಮದಘಟ್ಟ | ಜಿನಗನಹಳ್ಳಿ | 1, 2, 3, 4, 5, 36 | 1.30 | 600 |
| 9 | | ಇಬ್ಬೀಡು | ಸೂರಾಪುರ | 32 & 33 | 3.30 | 1500 |
| 10 | ಸಕಲೇಶಪುರ | ಯಸಳೂರು | ಹುಲಗತ್ತೂರು | 35 | 1.08 | 1350 |
| 11 | | | | 35 & 20 | 1.13 | 1500 |
| 12 | | ಉಚ್ಚಂಗಿ | ಕೊತ್ತನಹಳ್ಳಿ | 60 | 1.13 | 1500 |
| 13 | | | | 60 | 1.34 | 1550 |
| 14 | | | | 60, 61, 56, 64, 4, 5 | 1.13 | 1500 |

Deputy Director (Min. Admn)
Dept. of Mines & Geology
Bangalore-560001

ಅನುಬಂಧ–2

# ಹಾಸನ ಜಿಲ್ಲಾ ವ್ಯಾಪ್ತಿಯ ಸಕಲೇಶಪುರ ತಾಲ್ಲೂಕಿನ IV, V & VI ನೇ ಶ್ರೇಣಿಯ ಹೊಳೆ/ ನದಿಗಳಲ್ಲಿ ಮತ್ತು ಅಣೆಕಟ್ಟು / ಜಲಾಶಯ / ಬ್ಯಾರೇಜ್ ಗಳಲ್ಲಿ HGML & KSMCL ರವರಿಗೆ ಗುರುತಿಸಿ ಅಧಿಸೂಚನೆ ಹೊರಡಿಸಿರುವ ಮರಳು ಬ್ಲಾಕ್‌ಗಳ ವಿವರಗಳು

| ಕ್ರ ಸಂ. | ನದಿ ಪಾತ್ರದ ಹೆಸರು | ಗ್ರಾಮ | ಸರ್ವೇ ನಂ. | ಗುರುತಿಸಿರುವ ಮರಳು ಬ್ಲಾಕ್‌ನ ವಿಸ್ತೀರ್ಣ (ಎಕರೆಗಳಲ್ಲಿ) | ಗುರುತಿಸಿರುವ ಮರಳು ಬ್ಲಾಕ್‌ಗಳಲ್ಲಿರುವ ಅಂದಾಜು ಮರಳಿನ ಪ್ರಮಾಣ (ಮೆ.ಟನ್ ಗಳಲ್ಲಿ) |
|---|---|---|---|---|---|
| 1 | ಬಿಳಾಹ ಹಳ್ಳ | ಯಸಳೂರು–1 | 84, 82, 81, 79, 78, 76, 36, 37, 38, 39 | 6.00 | 10472 |
| 2 | ಬಿಳಾಹ ಹಳ್ಳ | ಯಸಳೂರು–2 | 85, 87, 88, 89, 102, 105, 106 | 6.20 | 11344 |
| 3 | ಕರಗೂರು ಹಳ್ಳ | ಕರಗೂರು–1 | 17, 32, 31, 30, 100 | 5.00 | 8726 |
| 4 | ಕರಗೂರು ಹಳ್ಳ | ಕರಗೂರು–2 | 19, 15, 14, 6, 7, 8, 9 | 6.00 | 10472 |
| 5 | ಪಾಲಹಳ್ಳಿ ಹಳ್ಳ | ಪಾಲಹಳ್ಳಿ | 26, 33, 50, 10, 11, 12 | 6.00 | 10472 |

CI-187-MMN-2021

Deputy Director (Min. Admn)
Dept. of Mines & Geology
Bangalore-560001

(10)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3121
ವಿಧಾನಸಭೆ ಸದಸ್ಯರ ಹೆಸರು : ಶ್ರೀ ಹ್ಯಾರಿಸ್.ಎನ್.ಎ (ಶಾಂತಿನಗರ)
ಉತ್ತರಿಸುವವರು : ಮಾನ್ಯ ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು
ಉತ್ತರಿಸಬೇಕಾದ ದಿನಾಂಕ : 19.03.2021

| ಕ್ರ.ಸಂ | ಪ್ರಶ್ನೆ | ಉತ್ತರ | Answer |
|---|---|---|---|
| ಅ) | ರಾಜ್ಯದಲ್ಲಿ ಆಧುನಿಕ ತಂತ್ರಜ್ಞಾನಗಳಿಗೆ ಸಂಬಂಧಪಟ್ಟ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವ ಕುರಿತು ಸರ್ಕಾರದ ಕ್ರಮಗಳೇನು; | ರಾಜ್ಯದಲ್ಲಿ ಆಧುನಿಕ ತಂತ್ರಜ್ಞಾನಗಳಿಗೆ ಸಂಬಂಧಪಟ್ಟ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವ ಕುರಿತು ಸರ್ಕಾರವು ಹೊಸ ಕೈಗಾರಿಕಾ ನೀತಿ 2020–25 ರಲ್ಲಿ ಈ ಕೆಳಗಿನ ಯೋಜನೆಗಳನ್ನು ಅಳವಡಿಸಿರುತ್ತದೆ:<br><br>**1. ತಂತ್ರಜ್ಞಾನ ಮೇಲ್ದರ್ಜೆಗೇರಿಸುವ ಸಾಲದ ಮೇಲೆ ಬಡ್ಡಿ ಸಹಾಯಧನ.**<br><br>ಉದ್ಯಮಶೀಲರು ಹಾಲಿ ಇರುವ ತಮ್ಮ ಕೈಗಾರಿಕಾ ಘಟಕದ ತಂತ್ರಜ್ಞಾನ ಮೇಲ್ದರ್ಜೆಗೇರಿಸಲು ಹೊಸ ಯಂತ್ರೋಪಕರಣಗಳನ್ನು ಖರೀದಿಸಲು ಭಾರತ ಸರ್ಕಾರದ ಸಿಎಲ್‌ಸಿಎಸ್‌ಎಸ್ (ಕ್ರೆಡಿಟ್ ಲಿಂಕ್ಡ್ ಕ್ಯಾಪಿಟಲ್ ಸಬ್ಸಿಡಿ ಸ್ಕೀಂ–ಸಾಲ ಸಂಯೋಜಿತ ಬಂಡವಾಳ ಸಹಾಯಧನ ಯೋಜನೆ) ಅಡಿಯಲ್ಲಿ ಒಳಗೊಂಡಿರದ, ಕೆಎಸ್‌ಎಫ್‌ಸಿ ಮತ್ತು ಅನುಸೂಚಿತ (ಷೆಡ್ಯೂಲ್ಡ್) ವಾಣಿಜ್ಯ ಬ್ಯಾಂಕ್‌ಗಳಿಂದ ಪಡೆದ ಸಾಲಗಳಿಗೆ ಶೇ.5 ರಂತೆ 5 ರಿಂದ 6 ವರ್ಷಗಳ ಕಾಲ ಬಡ್ಡಿ ಸಹಾಯಧನವನ್ನು ನೀಡಲಾಗುವುದು.<br><br>ಸಾಮಾನ್ಯ ವರ್ಗದವರಿಗೆ:<br><br>ವಲಯ 1 : 5% –6 ವರ್ಷದವರೆಗೆ<br>ವಲಯ 2 : 5% –5 ವರ್ಷದವರೆಗೆ<br>ವಲಯ 3 : 5% –5 ವರ್ಷದವರೆಗೆ<br><br>ವಿಶೇಷ ವರ್ಗದವರಿಗೆ : (ವಿಶೇಷ ಪ್ರವರ್ಗ (ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ, ಮಹಿಳೆಯರು, | To promote technology based micro and small industries Government of Karnataka has framed the following schemes under New Industrial Policy 2020-25:<br><br>**1. Interest Subsidy on Technology Up-gradation Loan**<br><br>Interest subsidy of 5% for a period of 5 to 6 years will be offered on loans availed from KSFC & Scheduled Commercial Banks which are not covered under CLCSS (Credit Linked Capital Subsidy Scheme) of Government of India by existing units for technology up gradation<br><br>**General Category**<br><br>Zone 1 : 5% -for 6 years<br>Zone 2 : 5% -for 5 years<br>Zone 3 : 5% - for 5 years<br><br>**Special Category:**<br>(SC/ST, Women, Minorities, Physically Challenged & Ex-Servicemen Entrepreneurs)<br><br>Zone 1 : 5% -for 6 years<br>Zone 2 : 5% -for 5 years<br>Zone 3 : 5% -for 5 years<br><br>**2. Technology Adoption** |

| | | | |
|---|---|---|---|
| | | ಅಲ್ಪಸಂಖ್ಯಾತರು, ವಿಕಲಾಂಗರು ಹಾಗೂ ನಿವೃತ್ತ ಸೈನಿಕ ಉದ್ಯಮಿಗಳು)<br>ವಲಯ 1 : 5% -6 ವರ್ಷದವರೆಗೆ<br>ವಲಯ 2 : 5% -5 ವರ್ಷದವರೆಗೆ<br>ವಲಯ 3 : 5% -5 ವರ್ಷದವರೆಗೆ<br>**2. ತಂತ್ರಜ್ಞಾನ ಅಳವಡಿಕೆಗೆ ಸಹಾಯಧನ:**<br>ದೇಶದಲ್ಲಿ ಮಾನ್ಯತೆ ಪಡೆದ 43 ಪ್ರಯೋಗಾಲಯಗಳಿಂದ ತಂತ್ರಜ್ಞಾನವನ್ನು ಪಡೆದು ತಮ್ಮ ಕೈಗಾರಿಕೆಗಳಿಗೆ ಅಳವಡಿಸಿದ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳಿಗೆ ಅದರ ವೆಚ್ಚದ ಶೇ.25 ರಷ್ಟು (ಗರಿಷ್ಟ ರೂ.50,000) ಸಹಾಯಧನ ನೀಡಲಾಗುವುದು. | 25% of cost (Max. Rs.50,000/-) subsidy will be offered for adopting technology from 43 recognized national laboratories. |
| ಆ) | ಸಣ್ಣ ಕೈಗಾರಿಕಾ ವಲಯದಲ್ಲಿ ಆಧುನಿಕ ರೀತಿ ನೀತಿಗಳ ಅನುಸರಣೆ ಮತ್ತು ಅನುಷ್ಠಾನದ ಕುರಿತಾದ ಸರ್ಕಾರದ ಪ್ರಸ್ತಾವನೆಗಳು ಯಾವುವು; | ಸಣ್ಣ ಕೈಗಾರಿಕಾ ವಲಯದಲ್ಲಿ ಆಧುನಿಕ ರೀತಿ ನೀತಿ ಅನುಸರಣೆ ಮತ್ತು ಅನುಷ್ಠಾನದ ಕುರಿತು ಸರ್ಕಾರವು ಹೊಸ ಕೈಗಾರಿಕಾ ನೀತಿ 2020-25 ರಲ್ಲಿ ಈ ಕೆಳಗಿನ ಯೋಜನೆಗಳನ್ನು ಅಳವಡಿಸಿದೆ:<br>**1. ಉತ್ಕೃಷ್ಟ ಕೇಂದ್ರ (Centre of Excellence)**<br>ಕೈಗಾರಿಕಾ ಸಂಘಟನೆಗಳು, ಅಗತ್ಯ ಸಾಮರ್ಥ್ಯ ಹೊಂದಿದ ಸಂಸ್ಥೆಗಳು ಹಾಗೂ ರಾಜ್ಯದ ಶ್ರೇಷ್ಠ ಶೈಕ್ಷಣಿಕ ತಂತ್ರಜ್ಞಾನ ಸಂಸ್ಥೆಗಳ ಸಹಕಾರದೊಂದಿಗೆ ರಾಜ್ಯದಲ್ಲಿ ಕೈಗಾರಿಕೆ 4.0 ರ ಉತ್ಕೃಷ್ಟ ಕೇಂದ್ರವನ್ನು ಸ್ಥಾಪಿಸಲಾಗುವುದು. ಬೆಂಗಳೂರು ಮತ್ತು ಇತರೆ ಪ್ರಾದೇಶಿಕ ಕೇಂದ್ರಗಳಿಗಾಗಿ ರಾಜ್ಯವು ರೂ.100.00 ಕೋಟಿ ಅನುದಾನ ನೀಡಲಿದೆ. ಆದರೆ ಈ ಉತ್ಕೃಷ್ಟ ಕೇಂದ್ರಗಳು ಪ್ರಸ್ತುತ ಇರುವ ಕಟ್ಟಡಗಳನ್ನೇ ಬಳಸಬೇಕಿದ್ದು, ಯಾವುದೇ ಹೊಸ ನಿರ್ಮಾಣವನ್ನು ಪರಿಗಣಿಸಲಾಗುವುದಿಲ್ಲ. | Under New Industrial Policy 2020-25 the following schemes have been proposed for Modern technology adoption and implementation.<br>**1. Centre of Excellence**<br>Centre of Excellence for Industry 4.0 shall be setup in the State with the help of industry associations, institutes having requisite capacity and any leading academic technical institution of the State. The State will provide a grant of **Rs.100 crore** for CoE at Bengaluru and its Regional Centres, subject to the condition that such CoE use only existing building/s and taking up of new construction will not be considered.<br>**Capital Subsidy for supporting Direct Digital Manufacturing**<br>Capital subsidy of **50%** limited |

| | | | |
|---|---|---|---|
| | | 2. ನೇರ ಡಿಜಿಟಲ್ ಉತ್ಪಾದನ (ಡೈರೆಕ್ಟ್ ಡಿಜಿಟಲ್) ಬೆಂಬಲಕ್ಕೆ ಬಂಡವಾಳ ಸಹಾಯಧನ<br><br>ರಾಜ್ಯದಲ್ಲಿ ಮೊದಲ ಐದು ಘಟಕಗಳಿಗೆ ನೀತಿ ಅವಧಿಯಲ್ಲಿ ಕೈಗಾರಿಕಾ ಸಂಘಟನೆಗಳು/ಸಾಮರ್ಥ್ಯ ಉಳ್ಳ ಸಂಸ್ಥೆಗಳ ನೆರವಿನೊಂದಿಗೆ ಪ್ರತೀ ಕೇಂದ್ರಕ್ಕೆ ರೂ.500.00 ಲಕ್ಷಕ್ಕೆ ಸೀಮಿತವಾಗಿ ಶೇ.50 ಬಂಡವಾಳ ಸಹಾಯಧನ ನೀಡಲಾಗುವುದು. ಕೈಗಾರಿಕಾ ಸಂಘಟನೆಗಳು/ಸಂಸ್ಥೆಗಳು ಈ ಸಾಮಾನ್ಯ ಸೌಕರ್ಯಗಳನ್ನು ನಿರ್ವಹಿಸಲಿದ್ದು, ಪ್ರತಿ ಬಳಕೆಗೆ ಪಾವತಿ ಆಧಾರದಲ್ಲಿ ಉಗ್ರಾಣ/ಭಂಡಾರಗಳಾಗಿ ಕಾರ್ಯನಿರ್ವಹಿಸಲಿವೆ. | to INR 500.00 lakh per centre for the first five units in the State with the help of industry associations / institutes having requisite capacity during the policy period. These common facilities will be housed and managed by industry association / institutes on pay-per-use basis & will act as a repositories. |
| ಇ) | ರಾಜ್ಯದಲ್ಲಿ ತಂತ್ರಜ್ಞಾನ ಆಧಾರಿತ ಶಿಕ್ಷಣವನ್ನು ಪಡೆದಿರುವ ಯುವಕ/ಯುವತಿಯರು ಗಣನೀಯ ಸಂಖ್ಯೆಯಲ್ಲಿ ಉದ್ಯೋಗವಿಲ್ಲದೇ ಅಸಹಾಯಕ ಪರಿಸ್ಥಿತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಂತಹವರುಗಳಿಗೆ ಮಾರ್ಗದರ್ಶನ ನೀಡಲು ಹಾಗೂ ಅವರುಗಳು ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಮುಂದಾಗುವಂತೆ ಮಾಡಲು ಸರ್ಕಾರ ಹಮ್ಮಿಕೊಂಡಿರುವ ಯೋಜನೆಗಳು ಯಾವುವು? | ರಾಜ್ಯದಲ್ಲಿ ತಂತ್ರಜ್ಞಾನ ಆಧಾರಿತ ಶಿಕ್ಷಣವನ್ನು ಪಡೆದಿರುವ ಯುವಕ/ ಯುವತಿಯರಿಗೆ ಮಾರ್ಗದರ್ಶನ ನೀಡಲು ಹಾಗೂ ಅವರುಗಳು ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಮುಂದಾಗುವಂತೆ ಮಾಡಲು ಸರ್ಕಾರವು ಹೊಸ ಕೈಗಾರಿಕಾ ನೀತಿ 2020–25 ರಲ್ಲಿ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.<br><br>1. ಉದ್ಯಮಶೀಲತಾ ಅಭಿವೃದ್ಧಿ ಕಾರ್ಯಕ್ರಮ<br><br>ಹೊಸ ತಲೆಮಾರಿನ ಉದ್ಯಮಿಗಳನ್ನು ಮತ್ತು ನವೋದ್ಯಮಗಳನ್ನು ಉತ್ತೇಜಿಸಲು ಉದ್ಯಮಶೀಲತೆ ಅಭಿವೃದ್ಧಿ ಮತ್ತು ನಿರ್ವಹಣೆ ಕಾರ್ಯಕ್ರಮಗಳು, ನಿರ್ದಿಷ್ಟ ಕ್ಷೇತ್ರ ಸಂಬಂಧಿ ಕೌಶಲ್ಯ ಕಾರ್ಯಕ್ರಮಗಳು, ಪ್ರಾಯೋಗಿಕ ತರಬೇತಿ, ಮಾರ್ಗದರ್ಶನಗಳನ್ನು ಟೆಕ್ಸಾಕ್/ಜಿಲ್ಲಾ ಕೈಗಾರಿಕಾ ಕೇಂದ್ರಗಳಿಂದ ನೀಡಲು ಕಾರ್ಯಕ್ರಮವನ್ನು ರೂಪಿಸಲಾಗಿದೆ.<br><br>2. ನಿರ್ದಿಷ್ಟ ವಲಯದ ಕೌಶಲ್ಯಗಳಿಗಾಗಿ ಸಾಂಸ್ಥಿಕ ಸಹಯೋಗ<br><br>ಎಲ್ಲಾ ವಲಯಗಳಲ್ಲಿ ನಿರ್ದಿಷ್ಟ ವಲಯದ ಉನ್ನತ ಕೌಶಲ್ಯ ಮತ್ತು | To guide the engineering and technical students to setup micro and small industries Government has framed the following schemes under New Industrial Policy 2020-25.<br><br>**1. Entrepreneurship Development Programmes**<br>Entrepreneurship development and management programmes, sector specific skilling programmes, hands-on training, mentoring will be conducted by TECSOK / DICs to promote new generation entrepreneurs and start-ups.<br><br>**2. Institutional Tie-Ups for Advanced Sector Specific Skilling**<br>Institutional tie-ups/ Vocational Training Institutes for sector specific advanced skilling & up-skilling coming up in all Zones through industry associations will be eligible for a **50** per cent capital subsidy on cost of equipment and machinery limited to **Rs.15.00 Lakh.** State will also play the role of a facilitator, if required. This |

| | | | |
|---|---|---|---|
| | | ಕೌಶಲ್ಯ ಹೆಚ್ಚಳಕ್ಕಾಗಿ ಸಾಂಸ್ಥಿಕ ಸಹಯೋಗ/ವೃತ್ತಿ ತರಬೇತಿ ಸಂಸ್ಥೆಗಳು ಕೈಗಾರಿಕಾ ಸಂಘಟನೆಗಳ ಸಹಯೋಗದೊಂದಿಗೆ ಸ್ಥಾಪಿಸಲು ಉಪಕರಣಗಳು ಮತ್ತು ಯಂತ್ರೋಪಕರಣಗಳ ವೆಚ್ಚದ ಮೇಲೆ ಶೇ.50 ಬಂಡವಾಳ ಸಹಾಯಧನಕ್ಕೆ ಅರ್ಹವಾಗಿದ್ದು ಗರಿಷ್ಠ ಮಿತಿ ರೂ.15.00 ಲಕ್ಷ ಆಗಿರುತ್ತದೆ. ಅಗತ್ಯವಿದ್ದಲ್ಲಿ ರಾಜ್ಯವು ಸಹಾಯಕರ ಪಾತ್ರ ನಿರ್ವಹಿಸಲಿದೆ. ಈ ಬಂಡವಾಳ ಸಹಾಯಧನವು ನೀತಿಯ ಅವಧಿಯಲ್ಲಿ ವರ್ಷಕ್ಕೆ ಕೇವಲ 2 ಘಟಕಗಳಿಗೆ ಮಾತ್ರ ಸೀಮಿತವಾಗಿದೆ.<br><br>**3. ಉದ್ಯೋಗದೊಂದಿಗೆ ತರಬೇತಿ**<br><br>ಐಟಿಐ ತೇರ್ಗಡೆ ಹೊಂದಿದ 2,000 ಅಭ್ಯರ್ಥಿಗಳಿಗೆ ಉದ್ಯೋಗಾರ್ಹತೆ ಹೆಚ್ಚಿಸಲು ಪ್ರತಿ ವರ್ಷ ಉದ್ಯೋಗ ತರಬೇತಿ ನೀಡಲು ಯೋಜನೆ ರೂಪಿಸಲಾಗಿದೆ. ಕೈಗಾರಿಕೆಗಳು ಪಾವತಿಸುವ ಸಂಬಳದ ಶೇ.50 ರಷ್ಟು ಪ್ರೋತ್ಸಾಹಧನವನ್ನು(ಸ್ಟೈಪೆಂಡ್) ಅಭ್ಯರ್ಥಿಗಳಿಗೆ ನೀಡಲು ಪ್ರಸ್ತಾವಿಸಲಾಗಿದ್ದು, ಪ್ರತಿ ಅಭ್ಯರ್ಥಿಗೆ ಮಾಸಿಕ ರೂ.7,000 ಮಿತಿ ಇರುತ್ತದೆ. ಉದ್ಯೋಗ ತರಬೇತಿಯ 6 ತಿಂಗಳಿಗೆ ಈ ಪ್ರೋತ್ಸಾಹಧನ ನೀಡಲಾಗುವುದು.<br><br>4. ಹೊಸ ಕೈಗಾರಿಕಾ ನೀತಿ 2020-25 ರನ್ವಯ ಈ ಕೆಳಗಿನ ಸಹಾಯಧನವನ್ನು ಹೊಸದಾಗಿ ಬಂಡವಾಳ ಹೂಡಿರುವ/ ವಿಸ್ತರಣೆ/ ವೈರುಧ್ಧೀಕರಣ/ ಆಧುನೀಕರಣ ಕಾರ್ಯಕ್ರಮ ಕೈಗೊಂಡಿರುವ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ನೀಡಲಾಗಿರುತ್ತದೆ:<br><br>1. ಬಂಡವಾಳ ಹೂಡಿಕೆ ಸಹಾಯಧನ<br>2. ಮುದ್ರಾಂಕ ಶುಲ್ಕ ವಿನಾಯಿತಿ<br>3. ನೋಂದಣಿ ಶುಲ್ಕ ರಿಯಾಯಿತಿ ಪ್ರಮಾಣಪತ್ರ<br>4. ಭೂಪರಿವರ್ತನಾ ಶುಲ್ಕ ಮರುಪಾವತಿ ಸಹಾಯಧನ<br>5. ವಿದ್ಯುತ್ ಸಹಾಯಧನ | capital subsidy will be available only to 2 units per year during the policy period.<br><br>**3. On the Job Training**<br>On the Job Training: A scheme would be formulated to provide on the job training to 2,000 ITI passed candidates each year to increase the employability of the candidates. It is proposed to give stipend to the extent of 50% of salary paid by the Industry subject to ceiling of Rs.7,000 per month per candidate. This incentive would be extended up to 6 months of on the job training.<br><br>4. Under Karnataka Industrial Policy 2020-25 the following incentives and concessions are being offered for new/ expansion/ modernization and diversification of MSMEs:<br>1. Investment promotion subsidy<br>2. Exemption from Stamp duty registration<br>3. Registration fee concession.<br>4. Reimbursement of NA conversion fee<br>5. Power subsidy to micro & small industries<br>6. Effluent treatment plant subsidy<br>7. Electricity tax exemption<br>8. Incentives to Export oriented units.<br>9. Technology up gradation, quality certification subsidy.<br>10. Rain Water harvesting / conservation subsidy<br>11. Interest subsidy for technology up gradation<br><br>5. **Prime Minister's Employment Generation Programme:** Under this scheme financial assistance to the projects upto Rs.25.00 lakh for manufacturing |

| | | | |
|---|---|---|---|
| | | 6. ವಿದ್ಯುತ್ ತೆರಿಗೆ ವಿನಾಯಿತಿ ಪ್ರಮಾಣಪತ್ರ<br>7. ತ್ಯಾಜ್ಯನೀರು ಸಂಸ್ಕರಣಾ ಘಟಕ ಸ್ಥಾಪನೆ ಸಹಾಯಧನ<br>8. ರಫ್ತು ಘಟಕಗಳಿಗೆ ಪ್ರೋತ್ಸಾಹಗಳು<br>9. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಸಹಾಯಧನ<br>10. ಮಳೆ ನೀರುಕೊಯ್ಲು / ಸಂರಕ್ಷಣೆ ಸಹಾಯಧನ<br>11. ತಂತ್ರಜ್ಞಾನ ಉನ್ನತೀಕರಣಕ್ಕೆ ಬಡ್ಡಿ ಸಹಾಯಧನ<br><br>5. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ - ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಟ ಸಾಲ ರೂ.25.00 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ.15 ರಿಂದ ಶೇ.35 ರವರೆಗೆ ಗರಿಷ್ಟ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>6. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇ.6 ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br>7. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ. 75 ರಿಯಾಯಿತಿ ದರದಲ್ಲಿ | sector and to the projects upto Rs. 10 lakh for Service Sector is extended in the form of loan through various banks. Subsidy percentage is 15% to 35%. Max subsidy available is 3.75 lakhs to 8.75 lakhs.<br><br>6. 6% interest subsidy is given to entrepreneurs desiring to establish micro and small enterprises availing loan from Karnataka State Finance Corporation for a period of 5 years. The max loan amount is Rs.5.00 crore.<br><br>7. Under SCSP/TSP scheme Industrial sites/ Plots/sheds will be allotted at 75% subsidized rate to SC/ST entrepreneurs by the Karnataka Industrial Areas Development Board/ Karnataka State Small Scale Industries Corporation. The maximum extent land to be considered for allotment at subsidized rate is 2 acres.<br><br>8. **Subsidy to micro enterprises/ artisan on loan availed from banks.** Under this scheme financial assistance will be given in the form of loan through financial institutions/ Commercial banks, Co-operative banks, Regional Rural Banks (excluding Credit co-operative societies) for the projects upto Rs.10.00 lakhs to SC/ST entrepreneurs for setting up Micro/small enterprises. The subsidy given under this scheme by Government is 60% limited to maximum of Rs.5.00 lakhs. |

| | | | |
|---|---|---|---|
| | | ಕೈಗಾರಿಕಾ ನಿವೇಶನಗಳನ್ನು (ಗರಿಷ್ಠ 2 ಎಕರೆ) ಮತ್ತು ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>8. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪ ಯೋಜನೆ ಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಗರಿಷ್ಠ ರೂ.10.00 ಲಕ್ಷ ಯೋಜನಾ ವೆಚ್ಚದ ಮೇಲೆ ಶೇ.60 ರಷ್ಟು ಗರಿಷ್ಟ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br><br>9. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಠ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ)ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿರಹಿತ ಗರಿಷ್ಠ ರೂ.33.00 ಲಕ್ಷ ಸಾಫ್ಟ್‌ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ. | 9. **Soft seed capital assistance to micro and small enterprises.**<br><br>Under this scheme, financial assistance to the extent of 50% of 1/3 of promoter's contribution will be given to SC/ST first generation entrepreneurs, intending to start new enterprises by availing loan from banks. Soft seed capital of maximum Rs.33.00 lakh will be sanctioned for the projects with less than Rs.2.0 crore investments on plant and machinery and Debt Equity ratio of 2:1. |

ಸಿಐ 51 ಎಸ್‌ಎಸ್‌ಐ 2021

(ಸಿ.ಸಿ ಪಾಟೀಲ್)
ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು
ಸಾರ್ವಜನಿಕ ಸಂಪರ್ಕ ಸಚಿವರು

(11)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3087 |
| ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ) |
| ಉತ್ತರಿಸಬೇಕಾದ ದಿನಾಂಕ | : | 19.03.2021 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹಾಸನ ಜಿಲ್ಲೆಯ 07 ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಿಂದ ಅಡುಗೆ ಅನಿಲ ಸಂಪರ್ಕವನ್ನು ಪಡೆದಿರುವ ಫಲಾನುಭವಿಗಳ ಸಂಖ್ಯೆ ಎಷ್ಟು; (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಿಂದ ಮುಖ್ಯಮಂತ್ರಿ ಅನಿಲಭಾಗ್ಯ ಯೋಜನೆ ಅಡಿಯಲ್ಲಿ ಅರ್ಹ ಫಲಾನುಭವಿಗಳಿಗೆ ಅಡುಗೆ ಅನಿಲ ಸಂಪರ್ಕಗಳನ್ನು ಒದಗಿಸಲಾಗಿರುತ್ತದೆ. ಸದರಿ ಯೋಜನೆಯಡಿ ಹಾಸನ ಜಿಲ್ಲೆಯಲ್ಲಿ ವಿಧಾನ ಸಭೆ ಕ್ಷೇತ್ರವಾರು ಅನಿಲ ಸಂಪರ್ಕಗಳನ್ನು ಒದಗಿಸಿರುವ ಫಲಾನುಭವಿಗಳ ವಿವರ ಈ ಕೆಳಕಂಡಂತಿರುತ್ತದೆ. |
| ಆ | ಈ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಿಂದ ಅಡುಗೆ ಅನಿಲ ಸಂಪರ್ಕವನ್ನು ನೀಡಲು ಬಾಕಿ ಇರುವ ಫಲಾನುಭವಿಗಳ ಸಂಖ್ಯೆ ಎಷ್ಟು; (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಈಗಾಗಲೇ ನಿಗದಿತ ಗುರಿಯಂತೆ ಮುಖ್ಯಮಂತ್ರಿ ಅನಿಲಭಾಗ್ಯ ಯೋಜನೆಯಡಿ ಹಾಸನ ಜಿಲ್ಲೆಯಲ್ಲಿ ಸಂಪೂರ್ಣವಾಗಿ ಅಡುಗೆ ಅನಿಲ ಸಂಪರ್ಕವನ್ನು ನೀಡಲಾಗಿದೆ. |

| ಕ್ರ.ಸಂ | ವಿಧಾನ ಸಭಾ ಕ್ಷೇತ್ರದ ಹೆಸರು | ಅನಿಲ ಸಂಪರ್ಕ ಪಡೆದಿರುವ ಫಲಾನುಭವಿಗಳ ಸಂಖ್ಯೆ |
|---|---|---|
| 1 | ಅರಕಲಗೂಡು | 1650 |
| 2 | ಅರಸೀಕೆರೆ | 747 |
| 3 | ಬೇಲೂರು | 814 |
| 4 | ಶ್ರವಣಬೆಳಗೊಳ | 204 |
| 5 | ಹಾಸನ | 81 |
| 6 | ಹೊಳೆನರಸೀಪುರ | 139 |
| 7 | ಸಕಲೇಶಪುರ | 615 |
| ಒಟ್ಟು | | 4250 |

| | | |
|---|---|---|
| ಇ | ಸದರಿ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಸದರಿ ಇಲಾಖೆಯಿಂದ ಅಡುಗೆ ಅನಿಲ ಸಂಪರ್ಕವನ್ನು ಪಡೆಯಲು ಬಾಕಿ ಇರುವ ಅರ್ಜಿಗಳನ್ನು ಎಷ್ಟು ದಿನಗಳಲ್ಲಿ ವಿಲೇವಾರಿ ಮಾಡಲಾಗುವುದು; | ಉದ್ಭವಿಸುವುದಿಲ್ಲ. |
| ಈ | ಅಡುಗೆ ಅನಿಲ ಸಂಪರ್ಕವನ್ನು ನೀಡಲು ಸರ್ಕಾರದ ನಿಗದಿಪಡಿಸಿರುವ ಮಾನದಂಡಗಳೇನು; | 1. ಆದ್ಯತಾ/ಅಂತ್ಯೋದಯ ಅನ್ನ ಯೋಜನೆ ಪಡಿತರ ಚೀಟಿದಾರರು ಯಾವುದೇ ಅನಿಲ ಸಂಪರ್ಕಗಳನ್ನು ಹೊಂದದೇ ಇರುವಂತಹ ಕುಟುಂಬಗಳು ಅರ್ಹತೆ ಹೊಂದಿರುತ್ತಾರೆ.(ನಗರ ಮತ್ತು ಗ್ರಾಮಾಂತರ ಪ್ರದೇಶದವರು)<br>2. ಯಾವುದೇ ಅನಿಲ ಸಂಪರ್ಕವನ್ನು ಹೊಂದಿರದ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ನೋಂದಾಯಿಸಿರುವ ಕಟ್ಟಡ ಕಾರ್ಮಿಕರು ಯಾವುದೇ ಅನಿಲ ಸಂಪರ್ಕಗಳನ್ನು ಹೊಂದದೇ ಇರುವಂತಹ ಕುಟುಂಬಗಳಿಗೆ ಮುಖ್ಯಮಂತ್ರಿ ಅನಿಲ ಭಾಗ್ಯ ಯೋಜನೆಯಡಿ ಅನಿಲ ಸಂಪರ್ಕಗಳನ್ನು ಒದಗಿಸಲಾಗುವುದು. |
| ಉ | ಅಡುಗೆ ಅನಿಲ ಸಂಪರ್ಕವನ್ನು ಪಡೆಯಲು ಬಾಕಿ ಇರುವ ಪ್ರಕರಣಗಳೆಷ್ಟು ಹಾಗೂ ಎಷ್ಟು ದಿನಗಳೊಳಗೆ ವಿತರಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಯಾವುದೇ ಪ್ರಕರಣಗಳು ಬಾಕಿ ಇರುವುದಿಲ್ಲ. |

ಆನಾಸ 113 ಡಿಆರ್‌ಎ 2021 (ಇ-ಆಫೀಸ್)

(ಉಮೇಶ್.ವಿ ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

12

# ಕರ್ನಾಟಕ ವಿಧಾನಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಸುರೇಶ್ ಗೌಡ (ನಾಗಮಂಗಲ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 2098 |
| ಉತ್ತರಿಸಬೇಕಾದ ದಿನಾಂಕ | : | 19.03.2021 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ನಾಗಮಂಗಲ ಪುರಸಭಾ ವ್ಯಾಪ್ತಿಯಲ್ಲಿ ಹೊಸದಾಗಿ ಸೇರ್ಪಡೆಯಾಗಿರುವ ಪ್ರದೇಶಗಳಲ್ಲಿ (24 X 7) ಸಮಗ್ರ ಕುಡಿಯುವ ನೀರು ಸರಬರಾಜು ಕಾಮಗಾರಿಗೆ ಎಷ್ಟು ಮೊತ್ತದ ಯೋಜನೆ ತಯಾರಿಸಲಾಗಿದೆ; | ನಾಗಮಂಗಲ ಪಟ್ಟಣಕ್ಕೆ 2ನೇ ಹಂತದ ಕುಡಿಯುವ ನೀರು ಸರಬರಾಜು ಮಾಡಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೂ.150 ಕೋಟಿಗಳಿಗೆ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ ಸಲ್ಲಿಸಲಾಗಿತ್ತು. ಅನುದಾನದ ಕೊರತೆಯಿಂದಾಗಿ ಈ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿರುವುದಿಲ್ಲ. ಮುಂದಿನ ದಿನಗಳಲ್ಲಿ ಅನುದಾನ ಲಭ್ಯತೆ ಆಧರಿಸಿ ಪರಿಶೀಲಿಸಲಾಗುವುದು. |
| ಆ | ಈ ಯೋಜನೆ ಪ್ರಸ್ತುತ ಯಾವ ಹಂತದಲ್ಲಿದೆ; | |
| ಇ | ಈ ಯೋಜನೆಗೆ ಅನುಮತಿ ನೀಡಿದ್ದರೂ ಸಹ ಇದುವರೆವಿಗೂ ಕಾಮಗಾರಿಯು ಪ್ರಾರಂಭವಾಗದಿರಲು ಕಾರಣವೇನು; | |
| ಈ | ಸದರಿ ಕಾಮಗಾರಿಯನ್ನು ಪ್ರಾರಂಭಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | |

ಸಂಖ್ಯೆ: ನಅಇ 83 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

13

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2087
ಸದಸ್ಯರ ಹೆಸರು : ಶ್ರೀ ಅಮೃತ್ ಅಯ್ಯಪ್ಪ ದೇಸಾಯಿ (ಧಾರವಾಡ)
ಉತ್ತರಿಸಬೇಕಾದ ದಿನಾಂಕ : 19.03.2021
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಧಾರವಾಡದ ಕೃಷಿ ಮಾರುಕಟ್ಟೆಯಲ್ಲಿನ ಬಡಾವಣೆಗಳಲ್ಲಿ ಮಹಾನಗರ ಪಾಲಿಕೆಯಿಂದ ಕರ ವಸೂಲಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಕರ ವಸೂಲಿಯಿಂದ ಬಂದ ಹಣದಲ್ಲಿ ಅಲ್ಲಿನ ಲೇಔಟ್‌ಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆಯೇ; | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಧಾರವಾಡ ಕೃಷಿ ಮಾರುಕಟ್ಟೆಯು ಕೃಷಿ ಮಾರಾಟ ಇಲಾಖೆ ಮತ್ತು ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ ಅಧೀನಕ್ಕೆ ಒಳಪಡುತ್ತಿದ್ದು, ಸದರಿ ಪ್ರದೇಶದ ಮಾಲೀಕತ್ವವು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯದ್ದಾಗಿರುವುದಿಲ್ಲ. ಧಾರವಾಡದ ಕೃಷಿ ಮಾರುಕಟ್ಟೆಗೆ ಬಂದು ಕೂಡುವ ಸಂಪರ್ಕ ಕಲ್ಪಿಸುವ ರಸ್ತೆ ಹಾಗೂ ಚರಂಡಿ, ಸದರಿ ಪ್ರದೇಶಕ್ಕೆ ಕೂಡುವ ರಸ್ತೆಗಳ ಬೀದಿ ದೀಪಗಳ ನಿರ್ವಹಣೆ, ಸದರಿ ಪ್ರದೇಶದಿಂದ ಬರುವ ಒಳಚರಂಡಿ ಕೊಳವೆ ಜೋಡಣೆ ಹಾಗೂ ಕುಡಿಯುವ ನೀರಿನ ಸಂಪರ್ಕವನ್ನು ಹುಬ್ಬಳ್ಳಿ- ಧಾರವಾಡ ಮಹಾನಗರ ಪಾಲಿಕೆಯಿಂದ ಕಲ್ಪಿಸಲಾಗಿರುತ್ತದೆ. |
| ಇ) | ಇಲ್ಲದಿದ್ದಲ್ಲಿ, ಕರ ವಸೂಲಿ ಮಾಡುವ ಉದ್ದೇಶವೇನು; | ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಹಾಗೂ ನಿರ್ವಹಣೆ ಮಾಡಲು ಕರ್ನಾಟಕ ಮಹಾನಗರ ಪಾಲಿಕೆ ಅಧಿನಿಯಮ 1976ರ ಕಲಂ 103 ರಂತೆ ಪಾಲಿಕೆಯು ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು ಪಾಲಿಕೆ ವ್ಯಾಪ್ತಿಯಲ್ಲಿರುವ ಕಟ್ಟಡ ಅಥವಾ ಖಾಲಿ ಭೂಮಿ ಅಥವಾ ಅವರೆಡರ ಮೇಲೆ ಆಸ್ತಿ ತೆರಿಗೆ ವಿಧಿಸಬೇಕಾಗಿರುತ್ತದೆ. ಸದರಿ ಕಾಯ್ದೆಯ ಕಲಂ 110 ರಡಿ ವಿನಾಯಿತಿಗೆ ಒಳಪಟ್ಟ ಆಸ್ತಿಗಳನ್ನು ಹೊರತುಪಡಿಸಿ, ಉಳಿದೆಲ್ಲಾ ಆಸ್ತಿಗಳಿಗೆ ತೆರಿಗೆ ವಿಧಿಸಿ ನಿಯಮಾನುಸಾರ ವಸೂಲಿ ಮಾಡಬೇಕಾಗಿರುತ್ತದೆ. |
| ಈ) | ಸದರಿ ಬಡಾವಣೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸರ್ಕಾರ ಕೈಗೊಂಡ ಕ್ರಮವೇನು ?(ವಿವರ ನೀಡುವುದು) | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಯಿಂದ ಧಾರವಾಡದ ಕೃಷಿ ಮಾರುಕಟ್ಟೆಗೆ ಬಂದು ಕೂಡುವ ಸಂಪರ್ಕ ಕಲ್ಪಿಸುವ ಸೌಕರ್ಯವಾದ ರಸ್ತೆ ಹಾಗೂ ಚರಂಡಿ, ಸದರಿ ಪ್ರದೇಶಕ್ಕೆ ಕೂಡುವ ರಸ್ತೆಗಳ ಬೀದಿ ದೀಪಗಳ ನಿರ್ವಹಣೆ, ಸದರಿ ಪ್ರದೇಶದಿಂದ ಬರುವ ಒಳಚರಂಡಿ ಕೊಳವೆ ಜೋಡಣೆ ಹಾಗೂ ಕುಡಿಯುವ ನೀರಿನ ಸಂಪರ್ಕ ಕಲ್ಪಿಸಲಾಗಿರುತ್ತದೆ. |

ಕಡತ ಸಂಖ್ಯೆ: ನಅಇ 22 ಹೆಚ್‌ಡಿಎಂಸಿ 2021(ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

14

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2301
2. ಸದಸ್ಯರ ಹೆಸರು : ಡಾ॥ ಯತೀಂದ್ರ ಸಿದ್ದರಾಮಯ್ಯ (ವರುಣ)
3. ಉತ್ತರಿಸುವ ದಿನಾಂಕ : 19.03.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಕೆ.ಐ.ಎ.ಡಿ.ಬಿ.ಯಿಂದ ಎಷ್ಟು ಎಕರೆ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲಾಗಿದೆ; ಎಷ್ಟು ಹಂಚಿಕೆ ಮಾಡಲಾಗಿದೆ; | ಕಳೆದ ಮೂರು ವರ್ಷಗಳಿಂದ ಇದುವರೆಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಕೈಗಾರಿಕಾ ಪ್ರದೇಶಕ್ಕಾಗಿ 6209-14 ಎಕರೆ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆ.<br>ಕಳೆದ ಮೂರು ವರ್ಷಗಳಲ್ಲಿ ಮಂಡಳಿಯು ಅಭಿವೃದ್ಧಿಪಡಿಸಿದ ಕೈಗಾರಿಕಾ ಪ್ರದೇಶಗಳಲ್ಲಿ ಒಟ್ಟು 2994-24 ಎಕರೆ ಜಮೀನನ್ನು ಹಂಚಿಕೆ ಮಾಡಲಾಗಿದೆ. |
| (ಆ) | ವರುಣ ವಿಧಾನಸಭಾ ಕ್ಷೇತ್ರದಲ್ಲಿ ಎಷ್ಟು ಎಕರೆ ಜಮೀನುಗಳನ್ನು ಭೂ ಸ್ವಾಧೀನ ಪಡಿಸಿಕೊಳ್ಳಲಾಗಿದೆ; ಎಷ್ಟು ಎಕರೆ ಹಂಚಿಕೆ ಮಾಡಲಾಗಿದೆ; | ಇದುವರೆಗೂ ವರುಣ ವಿಧಾನಸಭಾ ಕ್ಷೇತ್ರದಲ್ಲಿ ಕೈಗಾರಿಕಾ ಪ್ರದೇಶಕ್ಕಾಗಿ 1852-17½ ಎಕರೆ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆ.<br>ಭೂಸ್ವಾಧೀನಪಡಿಸಿದ 1852-17½ ಎಕರೆ ಜಮೀನಿನಲ್ಲಿ 3 ಕೈಗಾರಿಕಾ ಪ್ರದೇಶಗಳನ್ನು ಕೆ.ಐ.ಎ.ಡಿ.ಬಿ.ಯಿಂದ ಅಭಿವೃದ್ಧಿಪಡಿಸಿದ್ದು. ಈ ಪೈಕಿ ಹಂಚಿಕೆಗೆ ಲಭ್ಯವಿರುವ 1072-04 ಎಕರೆ ಜಮೀನಿನಲ್ಲಿ 809-34½ ಎಕರೆ ಜಮೀನನ್ನು ಹಂಚಿಕೆ ಮಾಡಲಾಗಿದೆ. |
| (ಇ) | ಈ ರೀತಿ ಭೂಸ್ವಾಧೀನಪಡಿಸಿಕೊಂಡ ಜಮೀನುಗಳು ಎಷ್ಟು ವರ್ಷದಿಂದ | ಸದರಿ ಕೈಗಾರಿಕಾ ಪ್ರದೇಶಗಳಲ್ಲಿ ಈಗಾಗಲೇ 809-34½ ಎಕರೆ ಜಮೀನು ಹಂಚಿಕೆ ಮಾಡಿದ್ದು, ಉಳಿಕೆ ಜಮೀನಿನ ಹಂಚಿಕೆ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |

| | | |
|---|---|---|
| | ಹಂಚಿಕೆಯಾಗದೇ ಬಾಕಿ ಉಳಿದಿರುತ್ತವೆ; | ಆಸಕ್ತ ಉದ್ದಿಮೆದಾರರಿಂದ ಅರ್ಹ ಅರ್ಜಿಗಳು ಸ್ವೀಕೃತವಾದಲ್ಲಿ ಹಂಚಿಕೆ ಮಾಡಲು ಕ್ರಮ ಕೈಗೊಳ್ಳಲಾಗುವುದು. |
| (ಈ) | ಹಲವಾರು ವರ್ಷಗಳು ಕಳೆದರೂ ಭೂ ಸ್ವಾಧೀನ ಪಡಿಸಿಕೊಂಡ ಜಮೀನುಗಳು ಹಂಚಿಕೆಯಾಗದೇ ಬಾಕಿ ಉಳಿದಿರುವ ಕಾರಣದಿಂದ ರೈತರು ಜಮೀನನ್ನು ಕಳೆದುಕೊಂಡು ಮತ್ತು ಉದ್ಯೋಗವೂ ಇಲ್ಲದೆ ನಷ್ಟ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೇಲಿನಂತೆ ಸ್ವಾಧೀನಪಡಿಸಿಕೊಂಡಿರುವ 1852-17½ ಎಕರೆ ಜಮೀನಿನ ಪೈಕಿ ಹಂಚಿಕೆಗೆ ಲಭ್ಯವಿರುವ 1072-04 ಎಕರೆ ಜಮೀನಿನಲ್ಲಿ ಹಾಲಿ ಅಭಿವೃದ್ಧಿಪಡಿಸಿರುವ ಕೈಗಾರಿಕಾ ಪ್ರದೇಶಗಳಲ್ಲಿನ 809-34½ ಎಕರೆ ಜಮೀನನ್ನು ಈಗಾಗಲೇ ಹಲವು ಕಂಪನಿಗಳಿಗೆ ಹಂಚಿಕೆ ಮಾಡಲಾಗಿದ್ದು ಸದರಿ ಕಂಪನಿಗಳು ತಮ್ಮ ಯೋಜನೆಯನ್ನು ಅನುಷ್ಠಾನಗೊಳಿಸುವ ಕಾರ್ಯ ಪ್ರಗತಿಯಲ್ಲಿದೆ.<br><br>ಇನ್ನುಳಿದ 262-09½ ಎಕರೆ ಪ್ರದೇಶದಲ್ಲಿಯೂ ಸಹ ಹಲವು ಯೋಜನೆಗಳು ಅನುಮೋದನೆಗೊಳ್ಳುತ್ತಿದೆ.<br><br>ಘಟಕಗಳು ಸ್ಥಾಪನೆಯಾದ ನಂತರ ಭೂಮಿ ಕಳೆದುಕೊಂಡ ಭೂಮಾಲೀಕರ ಕುಟುಂಬದ ಒಬ್ಬ ಸದಸ್ಯರಿಗೆ ಉದ್ಯೋಗ ಕಲ್ಪಿಸಲು ಕ್ರಮ ಕೈಗೊಳ್ಳಲಾಗುವುದು. |
| (ಉ) | ಬಂದಿದ್ದಲ್ಲಿ ಈ ರೀತಿ ಜಮೀನು ಹಂಚಿಕೆ ಮಾಡಲು ಬಾಕಿ ಇರುವ ಭೂ ಮಾಲೀಕರ ಕುಟುಂಬದವರಿಗೆ ಉದ್ಯೋಗ ನೀಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ವರುಣ ವಿಧಾನಸಭಾ ಕ್ಷೇತ್ರದಲ್ಲಿ ಸ್ವಾಧೀನಪಡಿಸಿಕೊಂಡು ಅಭಿವೃದ್ಧಿ ಪಡಿಸಲಾದ ಕೈಗಾರಿಕಾ ಪ್ರದೇಶಗಳು ಹೊಸದಾದ ಕೈಗಾರಿಕಾ ಪ್ರದೇಶಗಳಾಗಿರುವುದರಿಂದ ಹಂಚಿಕೆ ಪ್ರಕ್ರಿಯೆಯು ಜಾರಿಯಲ್ಲಿರುತ್ತವೆ.<br><br>ಹಂಚಿಕೆ ಪಡೆದ ಉದ್ದಿಮೆಗಳು ಸ್ವಾಧೀನ ಪಡೆದು ಉದ್ದೇಶಿತ ಯೋಜನೆಗಳನ್ನು ಅನುಷ್ಠಾನಗೊಳಿಸಿ. ಘಟಕವು ಸ್ಥಾಪನೆಯಾದ ನಂತರ ಭೂಮಿ ಕಳೆದುಕೊಂಡ ಭೂಮಾಲೀಕರ ಕುಟುಂಬದ ಒಬ್ಬ ಸದಸ್ಯರಿಗೆ ಆದ್ಯತೆ ಮೇರೆಗೆ ಉದ್ಯೋಗ ನೀಡುವ ಷರತ್ತು ವಿಧಿಸಿ. ಹಂಚಿಕೆದಾರರಿಗೆ ಗುತ್ತಿಗೆ ಕರಾರು ಮಾಡಿಕೊಡಲಾಗುತ್ತದೆ. |

| | | |
|---|---|---|
| | | ಘಟಕಗಳು ಸ್ಥಾಪನೆಯಾದ ನಂತರ ಭೂಮಿ ಕಳೆದುಕೊಂಡ ಭೂಮಾಲೀಕರ ಕುಟುಂಬದ ಒಬ್ಬ ಸದಸ್ಯರಿಗೆ ಉದ್ಯೋಗ ಕಲ್ಪಿಸಲು ಕ್ರಮ ಕೈಗೊಳ್ಳಲಾಗುತ್ತದೆ. |

ಸಂಖ್ಯೆ: ಸಿಐ 94 ಐಎಪಿ (ಇ) 2021

(ಜಗದೀಶ ಶೆಟ್ಟರ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

15

## ಕರ್ನಾಟಕ ವಿಧಾನಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ ಕೆ. (ಉಡುಪಿ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3159 |
| ಉತ್ತರಿಸಬೇಕಾದ ದಿನಾಂಕ | : | 19.03.2021 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಕೃಷಿ ವಲಯದಲ್ಲಿನ 10 ಸೆಂಟ್ಸ್‌ವರೆಗಿನ ಜಾಗಕ್ಕೆ ಭೂ ಪರಿವರ್ತನೆಗೆ ಅವಕಾಶ ನೀಡುವ ಕುರಿತು ನಿರ್ಣಯ ಕೈಗೊಂಡು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಲಾಗಿದ್ದರೂ ಈ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸುವಲ್ಲಿ ವಿಳಂಬವಾಗಲು ಕಾರಣವೇನು? (ಸಂಪೂರ್ಣ ವಿವರ ಒದಗಿಸುವುದು) | ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ 10 ಸೆಂಟ್ಸ್ ವರೆಗಿನ ಕೃಷಿ ಜಮೀನನ್ನು ಕೃಷಿ ವಲಯದಿಂದ ವಸತಿ ವಲಯಕ್ಕೆ ಭೂ ಪರಿವರ್ತನೆ ಮಾಡುವುದಕ್ಕೆ ಸಂಬಂಧಿಸಿದಂತೆ ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ವಲಯ ನಿಯಮಾವಳಗಳಿಗೆ ತಿದ್ದುಪಡಿ ಮಾಡುವ ಪ್ರಸ್ತಾವನೆಯು ಸರ್ಕಾರಕ್ಕೆ ಸ್ವೀಕೃತವಾಗಿರುತ್ತದೆ.<br><br>ಕೃಷಿ ವಲಯದಿಂದ ವಸತಿ ವಲಯಕ್ಕೆ ಭೂ ಪರಿವರ್ತನೆ ಮಾಡುವ ಪೂರ್ವದಲ್ಲಿ ಕೆ.ಟಿ.ಸಿ.ಪಿ. ಕಾಯ್ದೆ, 1961ರ ಕಲಂ 14–ಎ ರಡಿಯಲ್ಲಿ ಕಡ್ಡಾಯವಾಗಿ ಭೂ ಉಪಯೋಗ ಬದಲಾವಣೆ ಅನುಮತಿ ಪಡೆಯಬೇಕಿರುತ್ತದೆ.<br><br>ಸದರಿ ಪ್ರಸ್ತಾವನೆಯು ಕೆ.ಟಿ.ಸಿ.ಪಿ. ಕಾಯ್ದೆ, 1961ರ ಕಲಂ 14 ಮತ್ತು 14–ಎ ಗೆ ಅನುಗುಣವಾಗಿಲ್ಲದಿರುವುದರಿಂದ ಪ್ರಸ್ತಾವನೆಯನ್ನು ಪರಿಗಣಿಸುವುದು ಸೂಕ್ತವಲ್ಲವೆಂದು ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ನೀಡಿರುವ ತಾಂತ್ರಿಕ ಅಭಿಪ್ರಾಯವನ್ನು ಪ್ರಾಧಿಕಾರಕ್ಕೆ ದಿನಾಂಕ 27.8.2020ರಂದು ತಿಳಿಸಲಾಗಿದೆ. |
| 2 | ಸದರಿ ವಲಯ ನಿಯಮಾವಳಿಯಿಂದ 10 ಸೆಂಟ್ಸ್ ವರೆಗಿನ ಜಾಗವನ್ನು ಕೃಷಿ ವಲಯದಿಂದ ವಸತಿ ವಲಯಕ್ಕೆ ಭೂ ಪರಿವರ್ತನೆ ಮಾಡಲು ಅವಕಾಶವಿಲ್ಲದೆ ವಾಸ್ತವ್ಯಕ್ಕಾಗಿ ಮನೆ ನಿರ್ಮಿಸುವವರು ಸಂಕಷ್ಟಕ್ಕೆ ಒಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | |
| 3 | ರಾಜ್ಯದ ಇತರೆ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ 10 ಸೆಂಟ್ಸ್ ವರೆಗಿನ ಜಾಗವನ್ನು ಕೃಷಿ ವಲಯದಿಂದ ವಸತಿ ವಲಯಕ್ಕೆ ಭೂ ಪರಿವರ್ತನೆ ಮಾಡಲು ಇರುವ ವಲಯ ನಿಯಮಾವಳಿಗಳೇನು? (ಆದೇಶದ ಪ್ರತಿ ಸಹಿತ ಸಂಪೂರ್ಣ ವಿವರಗಳನ್ನು ನೀಡುವುದು) | ಮಹಾಯೋಜನೆಯಲ್ಲಿನ ಕೃಷಿ ವಲಯದ ಜಮೀನನ್ನು ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಕೋರಿ ಕೆ.ಟಿ.ಸಿ.ಪಿ. ಕಾಯ್ದೆ, 1961ರ ಕಲಂ 14–ಎ ರಡಿ ಪ್ರಾಧಿಕಾರದಿಂದ ಸ್ವೀಕೃತಗೊಳ್ಳುವ ಪ್ರಸ್ತಾವನೆಯನ್ನು ನಿಯಮಾನುಸಾರ ಪರಿಶೀಲಿಸಿ ಕೃಷಿ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಬೇಕಾಗಿರುತ್ತದೆ. ಮಹಾಯೋಜನೆಯಲ್ಲಿ ವಸತಿ ವಲಯದಲ್ಲಿ ಕಾಯ್ದಿರಿಸಿದ ಜಮೀನಿಗೆ ವಸತಿ ಉಪಯೋಗಕ್ಕೆ ಭೂ ಪರಿವರ್ತನೆಗೆ ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಬಂದಲ್ಲಿ, ಪ್ರಾಧಿಕಾರದಿಂದ ತಾಂತ್ರಿಕ ಅಭಿಪ್ರಾಯ ಪಡೆದು ನಿಯಮಾನುಸಾರ ಪರಿಶೀಲಿಸಲಾಗುವುದು. |

ಸಂಖ್ಯೆ: ನಅಇ 48 ಎಲ್.ಎ.ಕ್ಯೂ. 2021 (ಇ)

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು